ಕಾಂಗ್ರೆಸ್ ಸ್ವರೂಪ ದರ್ಶನ

# ‘ಪ್ರಾಂತಭಾಷೆ - ರಾಷ್ಟ್ರಭಾಷೆ’

೫


ಲೇಖಕ :

ರಂಗನಾಥ ದಿವಾಕರ




ಕಾಂಗ್ರೆಸ್ ರತ್ನಮಹೋತ್ಸವ ವರುಷ

೧೯೪೫


ಪ್ರಸಾರಕರು.

ಸಾಹಿತ್ಯ ಭಾಂಡಾರ.

[illegible]

ಬೆಲೆ : ೦—೬—೦

# ಪ್ರಕಾಶಕರ ಮುನ್ನುಡಿ

ಕಾಂಗ್ರೆಸ್ಸಿನ ರತ್ನಮಹೋತ್ಸವ ಶುಭ ಪ್ರಸಂಗದಲ್ಲಿ ನಮ್ಮ ಮುಡಿಪೆಂದು ಅರ್ಪಿಸುತ್ತಿರುವ **ಪುಸ್ತಕಮಾಲೆ**ಯಲ್ಲಿ ಇದೊಂದು. ಇದರಲ್ಲಿಯ ವಿಚಾರ ಹಾಗೂ ಭಾಷೆ ಇವು ಲೇಖಕನವು, ಧ್ಯೇಯ ಧೋರಣೆಗಳು ಕಾಂಗ್ರೆಸ್ಸಿನವು. ಸ್ವಾತಂತ್ರ್ಯಕ್ಕಾಗಿ, ಶಾಂತಿಗಾಗಿ ಜನಸಾಮಾನ್ಯರ ವಿಕಾಸ ಮತ್ತು ಸುಖಕ್ಕಾಗಿ ಹಗಲಿರುಳು ತ್ಯಾಗ-ಪೂರ್ವಕವಾಗಿ ಸತತ ೬೦ ವರುಷ ಹೋರಾಡುತಿರುವ ರಾಷ್ಟ್ರೀಯ ಮಹಾಸಭೆಯ ಸ್ವರೂಪದರ್ಶನವನ್ನು ಈ ಬಗೆಯಿಂದ ಮಾಡುವ ಸುಸಂಧಿಯು ನಮಗೆ ದೊರೆತುದು ನಮ್ಮ ಭಾಗ್ಯವು. ಈ ಸೇವೆಯನ್ನು ಕರ್ನಾಟಕಸ್ಥರು ಸವಿ ಮಾಡಿಕೊಳ್ಳುವರೆಂದು ನಂಬಿದ್ದೇವೆ.

**ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟ,**
**ಹುಬ್ಬಳ್ಳಿ**



ಮುದ್ರಕರು :
**ಆರ್. ಎ. ಹಿರೇಮಠ**
ಚಂದ್ರೋದಯ ಮುದ್ರಣಾಲಯ,
ಧಾರವಾಡ

ಪ್ರಕಾಶಕರು :
**ಹ. ರಾ. ಮೋಹರೆ**
ಸಂಯುಕ್ತ ಕರ್ನಾಟಕ ಮುದ್ರಣಾಲಯ,
ಹುಬ್ಬಳ್ಳಿ

॥ ವಂದೇ ಮಾತರಂ ॥

# ಪ್ರಾಂತಭಾಷೆ-ರಾಷ್ಟ್ರಭಾಷೆ

## ೧. ಪ್ರಾಂತ ಭಾಷೆ

### ಒಂದು ನೆನಪು

೧೯೫೪ ರಲ್ಲಿಯ ಒಂದು ಮಾತು. ಇಡೀ ದಕ್ಷಿಣ ಹಿಂದುಸ್ತಾನದಲ್ಲಿ ಅತ್ಯುಚ್ಚವಾದ ನೀಲಗಿರಿ ಪರ್ವತದ ತಪ್ಪಲಲ್ಲಿರುವ ಉದಕ ಮಂಡಲಕ್ಕೆ ಹೋದ ಪ್ರಸಂಗವದು. ಅಲ್ಲಿಯ ದೊಡ್ಡಬೆಟ್ಟ ಎಂಬ ೮೬೦೦ ಅಡಿ ಇರುವ ಶಿಖರವನ್ನು, ಸಾಲು ಗಟ್ಟಿ ಶಿಸ್ತಿನಿಂದ ನಿಂತಿರುವ ೨೦೦-೨೫೦ ಅಡಿ ಎತ್ತರದ ನೀಲಗಿರಿ ಎಣ್ಣೆಯ ಗಿಡಗಳನ್ನು, ಅತ್ಯಂತ ರಮ್ಯ ಚಹಾ ತೋಟಗಳನ್ನು, ಹಚ್ಚ ಹಸರು ದುಂಡ ದುಂಡ ದಿನ್ನಗಳನ್ನು ನೋಡಿದೆನು. ಅವೆಲ್ಲವುಗಳಿಗಿಂತ ಅಲ್ಲಿರುವ ಬಡಗರತ್ತ ನನ್ನ ಮನಸು ಹೆಚ್ಚು ಎಳೆಯಿತು. ಬಡಗು ಭಾಷೆ ಮಾತಾಡುವ ಜನ ಅವರು, ಅವರನ್ನು ನೋಡಿ ಮಾತಾಡಿಸಿದೊಡನೆ ಅವರು ನನ್ನ ಬಾಂಧವರೆಂಬ ಭಾವನೆ ನನ್ನಲ್ಲಿ ಒಡಮೂಡಿತು. ಆ ಜಿಲ್ಹೆಯಲ್ಲಿ ನೂರಕ್ಕೆ ಸುಮಾರು ಅರುವತ್ತು ಜನ ಬಡಗರು. ಆದರೆ ಅಲ್ಲಿಯ ಪ್ರಾಥಮಿಕ ಶಾಲೆಗಳಲ್ಲಿ ತಮಿಳು, ಮಾಧ್ಯಮಿಕ ಶಾಲೆಗಳ ಬೋಧ ಭಾಷೆ ತಮಿಳು, ಕೋರ್ಟು ಕಚೇರಿಗಳಲ್ಲಿ ತಮಿಳು. ಅನೇಕ ವರುಷ ಹೀಗೆಯೆ ನಡೆಯುತ್ತ ಬಂದಿತ್ತು. ಆದರೂ ಇನ್ನೂ ಕನ್ನಡದ ಅಭಿಮಾನಿಗಳು ಆ ಬಡಗು ಬಾಂಧವರಲ್ಲಿ ಇನ್ನು ಅನೇಕರಿದ್ದಾರು. ಆರೇಗೌಡರ ಎಂಬವರು ಸ್ವಂತ ಖರ್ಚಿನಿಂದ ಕನ್ನಡ ಶಾಲೆ ಮುಂತಾದವುಗಳನ್ನು ನಡೆಸಿದ್ದರು. ಅಷ್ಟರಿಂದ ನನ್ನ ಸಮಾಧಾನವಾಗಲಿಲ್ಲ. ನಾನು ಸಂತೆ ಪೇಟೆಗಳಲ್ಲಿ ಅಡ್ಡಾಡಿದೆನು. ಹಲವು ಹಳ್ಳಿಗಳಿಗೆ ಹೋಗಿ ಹಳ್ಳಿಗರೊಡನೆ ಮಾತಾಡಿದೆನು. ನನ್ನ ವಿಷಯ ಒಂದೇ—ಕನ್ನಡ, ಕನ್ನಡ ಶಾಲೆ, ಕನ್ನಡ ಮಾಧ್ಯಮ, ಕನ್ನಡದ ಪ್ರಸಾರ.

ನಾನು ಆ ಬಗ್ಗೆ ಮಾತಾಡಲಾರಂಭಿಸಿದೊಡನೆ ಆ ಬಡ ಸಾದಾ ವೃತ್ತಿಯ ಬಡಗರ ಅಂತಃಕರಣಗಳು ಉಕ್ಕಿ ಬರುತಿದ್ದುವು, ಅವರ ಚಿತ್ತಹ

ಕ್ಷಾಂತಿತವಾಗುತ್ತಿತ್ತು. ಅವರ ಮುಖ ಅರಳುತ್ತಿತ್ತು. ಏನೋ ಒಂದು ಕಳ ಕೊಂಡ ವಸ್ತು ಅವರಿಗೆ ದೊರೆತಷ್ಟು ಆನಂದವಾಗುತ್ತಿತ್ತು 'ಹೌಂದು, ಕನ್ನಡ ಶಾಲೆಗಳಾದರೆ ನಮ್ಮ ಹುಡುಗರಿಗೆ ಹಬ್ಬ ಹಾಂಗೆ ಎಂದಾದೋತು?' ಎಂದು ಎಲ್ಲರೂ ಕುತೂಹಲದಿಂದ ಕೇಳುತ್ತಿದ್ದರು.

ಬಡಗು ಕನ್ನಡದ ಕೇವಲ ಒಂದು ಉಪಭಾಷೆ. ಅದು ಬಾಯಿ ಭಾಷೆ ಮಾತ್ರ. ಅದಕ್ಕೆ ಲಿಪಿ ಇಲ್ಲ. ಕನ್ನಡವೆ ಬಡಗರ ಸಾಂಸ್ಕೃತಿಕ ಭಾಷೆ. ಆದು ದರಿಂದ ಅಂದಚಂದ ಸವಿಗನ್ನಡದಲ್ಲಿ ಅವರೊಡನೆ ಮಾತಾಡಿದರೆ ಅವರಿಗೆ ಅತಿ ಪ್ರೀತಿ, ವಿಶೇಷ ಉತ್ಸಾಹ. ಕಟ್ಟು ಕತ್ತಲೆಯಲ್ಲಿ ಗುರುತಿನ ಧ್ವನಿ ಕೇಳಿದಂತೆ, ಕಾಡಡವಿಯಲ್ಲಿ ಸಂಗೀತದ ಸವಿಸ್ವರ ಕಿವಿಗೆ ಬಿದ್ದಂತೆ

ಈ ಅವರ ಕುತೂಹಲದ, ಹರುಷದ ಉತ್ಸಾಹದ ಗುಟ್ಟೇನು? ನೀಲಗಿರಿ ಜಿಲ್ಹೆ ಮೈಸೂರವರ ಕೈಬಿಟ್ಟು ಬ್ರಿಟಿಶರ ಕೈವಶವಾದಂದಿನಿಂದ ಅದು ತಮಿಳು ಭಾಷೆಯ ವರ್ಚಸ್ಸಿಗೆ ಈಡಾಗಿದೆ. ಎಲ್ಲಿ ನೋಡಿದರೂ ತಮಿಳೇ ತಮಿಳು. ಹೀಗೆ ಸುಮಾರು ನೂರು ವರುಷ ನಡೆಯುತ್ತ ಬಂದಿದ್ದರೂ ತಮಿಳು ಅಲ್ಲಿ ನಾಟಿಲ್ಲ, ಕನ್ನಡ ಕಾಲುಕಿತ್ತಿಲ್ಲ. ಇಂದಿಗೂ ಅವರಿಗೆ ತಮಿಳು ಎಂದರೆ ಎಡಚಿಡಚು, ತಲೆಶೂಲಿ. ಹಲ್ಲಿಲ್ಲದವರಿಗೆ ಕಡಲೆ ಕೊಟ್ಟಂತೆ. ಅವನ್ನು ನೀರಲ್ಲಿ ನೆನಸಿ ನುಣ್ಣಗೆ ಮಾಡಿ ತಿನ್ನಲೆತ್ನಿಸಬೇಕು. ಆದರೂ ಹೊಟ್ಟೆ ತುಂಬು ವಂತಿಲ್ಲ ಸಮಾಧಾನವಾಗುವಂತಿಲ್ಲ. ಕನ್ನಡವೆಂದೊಡನೆ ಅವರಿಗೆ ಸುಲಿದ ಬಾಳೆಯ ಹಣ್ಣು. ಇಷ್ಟು ಅಜಗಜಾಂತರ ಇದಕ್ಕೆ ಕಾರಣ ಒಂದೇ. ಕನ್ನಡ ಅವರ ಮಾತಿಗೆ ಹೊಂದಿದುದು, ಅವರ ಪರಿಚಯದ ಮಾತು,ಅವರ ತಾಯ್ನು ಡಿಗೆ ಸಂಬಂಧಿಸಿದ್ದು, ಇತರ ಭಾಷೆಗಳು ಅವರಿಗೆ ಅಪರಿಚಿತ. ಜನ ಸಾಮಾನ್ಯ ರಿಗೆ ಅವರವರ ಪರಿಚಯದ ಭಾಷೆಯಲ್ಲಿಯೆ ವಿದ್ಯೆಬುದ್ಧಿಗಳನ್ನು ಕಲಿಸಿದರೆ ಅದು ಒಗ್ಗುವದು. ಇಲ್ಲದಿದ್ದರೆ ಅರಗದು ಅವರಿಗೆ ಗಡಚಾಗುವದು. ಅವರು ಹೆಚ್ಚಿನ ಜ್ಞಾನ, ವಿಕಾಸ, ಕರ್ತೃತ್ವಗಳಿಗೆ ಎರವಾಗಿ ಕೇವಲ ಅಜ್ಞ, ಜಡ ಜೀವನವನ್ನು ಕಳೆಯಬೇಕಾಗುವದು.

### ಭಾಷೆ ಅಥವಾ ನುಡಿ.

ಮಾನವೀ ಪ್ರಗತಿಯ ಇತಿಹಾಸದಲ್ಲಿ ಭಾಷೆಗೆ ಅಥವಾ ನುಡಿಗೆ ಅತ್ಯಂತ ಮಹತ್ವದ ಸ್ಥಾನವಿರುವದು ಮೀನಿಗೆ ನೀರು, ಜೀವಕ್ಕೆ ಉಸಿರು ಅವಶ್ಯ

ವಿದ್ದಂತೆ ಜೀವನ ವಿಕಾಸಕ್ಕೆ ಭಾಷೆ ಅತ್ಯವಶ್ಯ. ಭಾಷೆಯೆಂಬುದು ಇರದಿದ್ದರೆ ಅಥವಾ ಬೆಳೆಯದಿದ್ದರೆ ಮಾನವನ ಗತಿ ಏನಾಗುತ್ತಿತ್ತು? ಮೂಕ ಮಾನವೀ ಸಮಾಜವು ಬೆಳೆದು, ಕಲಿತು, ಸುಧಾರಿಸಿ ಪ್ರಗತಿ ಪಥದಲ್ಲಿ ಮುಂದಡಿ ಇಡ ಬಹುದಾಗಿತ್ತೇ ? ಈಗ ಒಮ್ಮೆಲೆ ಭಾಷೆ ಎಂಬುದು ಮಾಯವಾದರೆ ಮನು ಷ್ಯನ ಪಾಡು ಏನಾಗುವದು ? ಒಂದೇ ಒಂದು ಪೆಟ್ಟಿಗೆ ಎಲ್ಲರೂ ಮೂಕಾಗಿ ಬಿಟ್ಟರೆಂದು ಕಲ್ಪಿಸುವ ! ಮನುಷ್ಯ ಬೇರೆಯಲ್ಲ, ಮಂಗ ಬೇರೆಯಲ್ಲ ಎಂಬ ಸ್ಥಿತಿ ಉಂಟಾಗುವದು. ಮಂಗ ಮುಂತಾದ ಪ್ರಾಣಿಗಳು ಸಾವಿರಾರು ವರು ಷಗಳಿಂದ ಒಂದೇ ಸ್ಥಿತಿಯಲ್ಲಿರುವವು. ಹತ್ತು ಸಾವಿರ ವರುಷದಾಚೆಗಿನ ಮಂಗ ಈ ಹೊತ್ತಿನ ಮಂಗ ಇವುಗಳಲ್ಲಿ ಯಾವ ಅಂತರವೂ ಇಲ್ಲ ಭಾಷೆ ಇಲ್ಲದಂತಾದರೆ ಮನುಷ್ಯನ ಅವಸ್ಥೆಯೂ ಪಶುಗಳಂತೆಯೆ ಆಗುವದು. ಅವನೂ ನಿತ್ಯ ಪಶುಜೀವನಕ್ಕೆ, ಆಹಾರ ನಿದ್ರಾಭಯ ಮೈಥುನಗಳಿಗೆ ಅವಶ್ಯ ವಿರುವ ನಾಲ್ಕು ಸನ್ನೆಗಳನ್ನು ಮಾಡುತ್ತ, ಹಕ್ಕಿಗಳಂತೆ ನಾಲ್ಕು ಕಿಲಬಿಲ ಶಬ್ದಗಳನ್ನುಚ್ಚರಿಸುತ್ತ ಕಾಲಕಳೆಯುವವನಾಗುವನು. ಅವನ ಪ್ರಗತಿಯಾ ಗಲು, ವಿಕಾಸಹೊಂದಿ ಈಗಿನ ಮಟ್ಟಿಗೆ ಬರಲು ಭಾಷೆ ಎಂಬುದು ಅತ್ಯಂತ ಪ್ರಬಲವಾದ ಸಾಧನವಾಗಿದೆಯೆಂಬಲ್ಲಿ ತಿಲಮಾತ್ರ ಸಂಶಯವಿಲ್ಲ. ಭಾಷೆಯ ಸಹಾಯವಿಲ್ಲದೆ ನಮ್ಮ ವಿಚಾರವು ವೇಗದಿಂದ ಸಾಗಲಾರದು. ವಿಚಾರ ಮುಂದರಿಯದಿದ್ದರೆ ನಮ್ಮ ಮತಿಯು ಕುಂಠಿತವಾಗುವದು. ಮತಿಯು ತಡೆ ದರೆ ನಮ್ಮ ಪ್ರಗತಿ ನಿಂತು ಹೋಗುವದು. ಈ ರೀತಿ ಮಾನವೀ ಮನೋ ವಿಕಾಸಕ್ಕೆ ಭಾಷೆಯು ಬೆಳವಣಿಗೆ ಮುಖ್ಯ ಸಾಧನವು ಎಂದರೆ ತಪ್ಪಾಗದು. ಕ್ಷಣಹೊತ್ತು ಭಾಷೆಯ ಸಹಾಯವಿಲ್ಲದೆ ನಾವು ವಿಚಾರ ಮಾಡಲು ಯತ್ನಿಸಿ ನೋಡಬೇಕು. ಅಂದರೆ ಮೇಲಿನ ಮಾತಿನ ಯಥಾರ್ಥತೆಯು ಅನುಭವಕ್ಕೆ ಬರುವದು.

ಭಾಷೆಯು ವಿಚಾರಕ್ಕೆ ಸಹಾಯಕವಿರುವಂತೆ ನಮ್ಮ ಭಾವನೆ ಅಭಿವ್ಯ ಕ್ತಿಗೂ ಅದು ಒಳ್ಳೆ ಸಾಧನವು. ವಿಚಾರ, ಭಾವನೆ, ಕಲ್ಪನೆ ಇವೆಲ್ಲ ಅಮೂರ್ತ, ಅವ್ಯಕ್ತ ವಸ್ತುಗಳು. ಅವು ಕಣ್ಣಿಗೆ ಕಾಣವು, ಕಿವಿಗೆ ಕೇಳವು, ಹಿಡಿತಕ್ಕೆ ಬರವು. ಅವೇ ಭಾಷಾರೂಪವನ್ನು ಧರಿಸಿದವೆಂದರೆ ನಮಗೆ ಸ್ಪಷ್ಟವಾಗುವವು. ಕಣ್ಣಿಗೆ ಕಾಣದ ಆತ್ಮವು ದೇಹದ ಮೂಲಕ ವ್ಯಕ್ತವಾಗುವಂತೆ ಮನಸು

ಅಂತಃಕರಣಗಳು ನುಡಿಯ ಮುಖಾಂತರ ಸ್ವರಸಂಕೇತದ ಮೂಲಕ ಒಡಮೂಡುವವು. ಮನಸು ಭಾಷೆಯೆಂಬ ಕುದುರೆಯನೇರಿ ಬೇಕಾದತ್ತ ಸಂಚರಿಸಬಲ್ಲದು. ಭಾಷೆಯು ಮನಸಿನ, ಭಾವನೆಗಳ, ಕಲ್ಪನೆಗಳ ವಾಹನವು. ಭಾಷೆಯಿಲ್ಲದಿದ್ದರೆ ಮನಸು ಮೂಕಾಗಿ ಮಂಕಾಗಿ ಕುಳಿತು ಬಿಡುವದು. ಭಾಷೆಯ ರೂಪದಿಂದ ಮನಸು ವ್ಯಕ್ತವಾಗಿ ನಿಲ್ಲುವದು. ಅದರ ಮೂಲಕವೆ ನಮಗೆ ಮನಸಿನ ಚಟುವಟಿಕೆಗಳ ತಿಳುವಳಿಕೆ ಆಗುವದು. ಒಬ್ಬ ಶಿಲ್ಪಿಗನ ಕಲ್ಪನೆ ಒಂದು ಸುಂದರ ಮಂದಿಂದ ರೂಪದಿಂದ ಹೆಪ್ಪುಗಟ್ಟಿ ನಿಲ್ಲುವಂತೆ ನಮ್ಮ ಮನಸು ಭಾಷೆಯ ರೂಪವನ್ನು ತಾಳಿ ನಮ್ಮೆದುರು ಕಂಗೊಳಿಸುವದು. ನಮ್ಮವೇ ಆದ ವಿಚಾರ ಮತ್ತು ಭಾವನೆಗಳ ಪುನರ್ವಿಚಾರ ಮಾಡಲು ನಮಗೆ ಭಾಷೆಯೆ ಅನುಕೂಲ ಮಾಡಿ ಕೊಡುವದು, ತನ್ನಶುದ್ಧ ರೀತಿಯಿಂದ ವಿಚಾರಗಳನ್ನು ಪರಿಶೀಲಿಸಲು ಭಾಷೆಯ ಮೂಲಕವೆ ಸಾಧ್ಯವಾಗುವದು. ಪ್ರತೀಕದ ಸಹಾಯದಿಂದ, ಮೂರ್ತಿಯ ಆಶ್ರಯ ಪಡೆದು ಅವ್ಯಕ್ತ ಪರಮಾತ್ಮನ ಧ್ಯಾನ ಮಾಡುವದು ಹೇಗೆ ಸುಲಭವೊ ಹಾಗೆ ಭಾಷೆಯ ಸಹಾಯದಿಂದ ನಮ್ಮ ವಿಚಾರ ಮತ್ತು ಭಾವನೆಗಳನ್ನು ಚನ್ನಾಗಿ ತಿಳಿದುಕೊಳ್ಳಲು, ಧ್ಯಾನಿಸಲು, ಅಳವಡಿಸಲು ಸಾಧ್ಯವೂ ಸುಲಭವೂ ಆಗುವದು.

ಇನ್ನೊಬ್ಬರ ವಿಚಾರ ಭಾವನೆಗಳ ಅರಿವು ನಮಗೆ ಆಗಲು, ಪರಸ್ಪರರಲ್ಲಿ ವಿಚಾರ ವಿನಿಯಮ ನಡೆಸಲು ಭಾಷೆಯೆ ಅನುಕೂಲಮಾಡಿಕೊಡುವದು. ನನ್ನಲ್ಲಿ ನಡೆದ ವಿಚಾರಗಳನ್ನು, ಉಕ್ಕಿಬಂದ ಭಾವನೆಗಳನ್ನು, ಇನ್ನೊಬ್ಬರಿಗೆ ತಿಳಿಸುವ ಬಗೆ ಹೇಗೆ? ಇನ್ನೊಬ್ಬರ ವಿಚಾರಗಳನ್ನು ತಿಳಿದುಕೊಳ್ಳಲು ಸಾಧನವೇನು? ತಾಯಿ ಮಗುವಿಗೆ, ತಂದೆ ಮಗನಿಗೆ, ಗುರು ಶಿಷ್ಯನಿಗೆ ಶಿಕ್ಷಣ, ಸಂಸ್ಕಾರ ಮುಂತಾದವುಗಳನ್ನು ಒದಗಿಸಿಕೊಡುವ ರೀತಿಯಾವದು? ಈ ಪ್ರಶ್ನೆಗಳಿಗೆ ಭಾಷೆ, ನಿಮ್ಮಿಬ್ಬರಿಗೂ ಬರುವ ಭಾಷೆ, ಎಂದೇ ಉತ್ತರಕೊಡಬೇಕಾಗುವದು. ಭಾಷೆ ಇಲ್ಲದಿದ್ದರೆ ಮೂಕ ಕಂಡ ಕನಸಿನಂತೆ ನನಗೆ ಹೊಳೆದ ವಿಚಾರ ನನಲ್ಲಿ ಎದ್ದ ಭಾವನಾತರಂಗ ಇವು ನನ್ನ ಮನೋಮಂಡಲದಲ್ಲಿಯೆ ಹುಟ್ಟಿ ಅಡಗಿ ಹೋಗುವವು. ಪ್ರವಾಹವಿಲ್ಲದ ನೀರು ನಿಂತು ಕೊಳೆತು ಹೋಗುವಂತೆ ಅವರವರ ಮನಸಿನಲ್ಲಿಯ ವಿಚಾರ ಭಾವನೆ ಕಲ್ಪನೆಗಳು ಅಲ್ಲಲ್ಲಿಯೆ ಕರಗಿ ಹೋಗುವವು. ನಿಷ್ಫಲ ಮರಗಳಂತೆ ಅವುಗಳ ಗತಿ

ಆಗುವದು. ಅದೇ ಭಾಷೆಯೆಂಬ ಸೇತುವೆ ಇದ್ದರೆ ಅವು ಮನದಿಂದ ಮನಕ್ಕೆ, ದೇಶದಿಂದ ದೇಶಕ್ಕೆ ಹೋಗಿ ಹಬ್ಬಿ ಬೆಳೆದು ಬಲಿತು ಫಲಕಾರಿಯಾಗುವವು

ಅಷ್ಟೇ ಏಕೆ? ಸಾವಿರಾರು ವರುಷಗಳಿಂದ, ಮಾನವನು ಪ್ರಥಮದಲ್ಲಿ ಪ್ರಗತಿಪಥವನ್ನು ನಡೆಯಲು ಪ್ರಾರಂಭಿಸಿದಂದಿನಿಂದ ಈ ಹೊತ್ತಿನ ವರೆಗೆ ಅವನು ಮಾಡಿದ ವಿಚಾರ, ಅವನ ಹೃದಯದಲ್ಲಿ ಉಂಟಾದ ಭಾವನೆ,ಅವನಿಗೆ ಕಾಲಕಾಲಕ್ಕೆ ಆದ ಅನುಭವ, ಇವೆಲ್ಲ ಭಾಷೆಯ ಮೂಲಕವೆ ನಮ್ಮತನಕ ಬಂದು ಮುಟ್ಟಿವೆ. ಭಾಷೆ ಇಲ್ಲದೆ ಹೋಗಿದ್ದರೆ ಅವೆಲ್ಲವುಗಳ ಲಾಭವು ನಮಗೆ ಈಗ ಆಗುವದು ಸಾಧ್ಯವೇ ಇರಲಿಲ್ಲ. ಅವೆಲ್ಲ ಅವರೊಡನೆಯೆ ಮಣ್ಣುಗೂಡಿ ಹೋಗುತ್ತಿದ್ದವು. ಅನೇಕ ವೈಜ್ಞಾನಿಕ ಪ್ರಯೋಗ ಹಾಗೂ ಶೋಧಗಳ ಸಂಗತಿಯೂ ಹೀಗೆಯೆ ಇರುವದು. ತಮತಮಗೆ ಹೊಳೆದ ಹೊಸ ಹೊಸ ತತ್ವಗಳನ್ನು, ನಿಸರ್ಗ ನಿಯಮಗಳನ್ನು ಆಯಾ ಸಂಶೋಧಕರು ತಮ್ಮ ಬಾಂಧವರಿಗೆ ಭಾಷೆಯ ಸಾಧನದಿಂದ ತಿಳಿಸುತ್ತ ಬಂದುದರಿಂದಲೆ ಈಹೊತ್ತು ಅವು ಇಡೀ ಮಾನವ ಕುಲಕ್ಕೆ ಉಪಲಬ್ಧವಾಗಿರುವವು? ಇಲ್ಲದಿದ್ದರೆ ಅವು ಎಂದೋ ಗಾಳಿಪಾಲಾಗಿ ಹೋಗುತ್ತಿದ್ದವು.

ಭಾಷೆ ಎಂಬದು ಅವ್ಯಕ್ತ, ಅಮೂರ್ತ ವಿಚಾರ ಮತ್ತು ಭಾವನೆಗಳ ಧ್ವನಿರೂಪ ಅಥವಾ ಶಬ್ದರೂಪ ಸಂಕೇತವು. ಆ ಸಂಕೇತವು ಕೇವಲ ಧ್ವನಿ ಅಥವಾ ಶಬ್ದರೂಪದಲ್ಲಿಯೆ ಉಳಿಯದೆ ಮುಂದೆ ಗ್ರಂಥಸ್ಥವಾಗ ಬೇಕಾದರೆ ಬರೆಹದ ರೂಪವನ್ನು ತಾಳಿತು. ಬರೆಹದ ಶೋಧದ ಮೂಲಕ ಭಾಷೆ ಮತ್ತಷ್ಟು ಹೆಚ್ಚು ವಿಕಾಸಹೊಂದಲು ಏಕರೂಪವಾಗಲು ಅನುಕೂಲ ವಾಯಿತು. ಬರೆಹವು ವಿಚಾರ ಸಂಗ್ರಹಕ್ಕೆ ಅತಿಶಯ ಸಹಾಯಕವಾಗಿರು ಬರೆಹವಿಲ್ಲದ ಬರೀ ಬಾಯಿ ಭಾಷೆ, ಬಹಳ ವಿಕಾಸಹೊಂದಲಾರದು, ವಿಚಾರ ಸಾಗರವನ್ನು ಸಂಗ್ರಹಿಸಿಡಲಾರದು. ಮನೋವಿಕಾಸದ ಮೂಲಕ ಕಳಿತ ವಿಚಾರವು ಭಾಷೆಯಾಗಿ ಬಾಯಲ್ಲಿ ಬಂದು ಬರೆಹ ರೂಪದಿಂದ ಕೈಸೇರುವುದ ರಿಂದ ಅದನ್ನು ಒಂದು ಜಡವಸ್ತುವಿನಂತೆ ಬೇಕಾದಲ್ಲಿಡಲು, ಸಂಗ್ರಹಿಸಲು, ಬೇಕಾದಾಗ ಉಪಯೋಗಿಸಲು, ಕೈಯೆತ್ತಿ ಕೊಡುಕೊಳ್ಳಲು ಸಾಧ್ಯವಾಗಿದೆ ಮುಂದೆ ಮತ್ತೆ ಆ ಬರೆಹವು ಸಹಸ್ರಾರು ಲಕ್ಷಾಂತರ ಜನರ ಕೈಸೇರಬೇಕಾ ದರೆ ಅಚ್ಚುಕೂಟಾದಿ ಸಾಧನಗಳು ತಯಾರಾಗಬೇಕಾಯಿತು. ಈ ರೀತಿ

ಪೂರ್ವ ಸಂಸ್ಕಾರಗಳ ಸಂಗ್ರಹವನ್ನೆಲ್ಲ, ಸರ್ವ ಅನುಭವಗಳ ಸಾರವನ್ನೆಲ್ಲ ಪರಂಪರೆಯಿಂದ ಹಿರಿಯರು ಕಿರಿಯರಿಗೆ ಕೈಯೆತ್ತಿ ಕೊಡಲು ಅನುವಾಯಿತು

ಈ ದೃಷ್ಟಿಯಿಂದ ನೋಡಿದರೆ ಮನುಷ್ಯನ ವಿಕಾಸದ ಇತಿಹಾಸದಲ್ಲಿ, ಮಾನವ ಸಂಸ್ಕೃತಿಯ ಬೆಳವಣಿಗೆಯ ಚರಿತ್ರೆಯಲ್ಲಿ ಭಾಷೆ ಬರೆಹಗಳಿಗೆ ಅತ್ಯಂತ ಪ್ರಮುಖ ಸ್ಥಾನವು ದೊರೆಯುವದು ಅಥವಾ ಭಾಷೆ ಬರೆಹಗಳು ಇಲ್ಲದೆ ಹೋಗಿದ್ದರೆ, ಸಂಸ್ಕೃತಿ ಪ್ರಗತಿಗಳ ಸಂಗ್ರಹ ಮತ್ತು ಪ್ರಸಾರ ಈ ಪ್ರಕಾರ ವ್ಯವಸ್ಥಿತವಾಗಿ ವೇಗದಿಂದ ಆಗುತಿರಲಿಲ್ಲ ಎಂದು ಧಾರಾಳವಾಗಿ ಹೇಳಬಹುದು.

## ಯಾವ ಭಾಷೆ ?

ಜಗತ್ತಿನಲ್ಲಿ ಭಾಷೆ ಒಂದೇ ಇಲ್ಲ. ಕನಿಷ್ಟ ಸಾವಿರಾರು ಬಾಯಿ ಭಾಷೆ ಬರೆಹದ ಭಾಷೆಗಳು ಇವೆ ಅವುಗಳಲ್ಲಿ ನೂರಕ್ಕೆ ತೊಂಬತ್ತರಷ್ಟು ಲಿಪಿರಹಿತ ಇದ್ದು ಸಣ್ಣ ಸಣ್ಣ ಮಾನವೀ ಗುಂಪುಗಳು ಮಾತಾಡುವಂತವು ಇವೆ. ಇಂಥ ಅಲ್ಪ ಸಂಖ್ಯರು ಸಾಮಾನ್ಯವಾಗಿ ತಮ್ಮ ನೆರೆಯಲ್ಲಿರುವ ಲಿಪಿಬದ್ಧ ಭಾಷೆಯನ್ನು ತಮ್ಮ ಸಾಂಸ್ಕೃತಿಕ ಭಾಷೆಯನ್ನಾಗಿ ಮಾಡಿಕೊಂಡಿರುವದು ಕಂಡು ಬರುವದು. ಬಾಯಿ ಭಾಷೆಗಳಲ್ಲಿ ಅಂಥ ಸಾಹಿತ್ಯಾದಿಗಳು ನಿರ್ಮಾಣವಾಗಿಲ್ಲ, ನಿರ್ಮಾಣವಾಗಲು ಈಗ ಅನುಕೂಲವಿಲ್ಲ. ಪ್ರತಿನಿತ್ಯದ ಸಾಮಾನ್ಯ ಪ್ರಾಣಿ ಜೀವನಕ್ಕೆ ಅವಶ್ಯವಿರುವ ಶಬ್ದಭಾಂಡಾರವು ಮಾತ್ರ ಆ ಭಾಷೆಗಳಲ್ಲಿರುವದು. ಲಿಪಿಬದ್ಧವಾಗಿ ಗ್ರಂಥಸ್ಥವಾದ ಭಾಷೆಗಳು ಜಗತ್ತಿನಲ್ಲಿ ಸುಮಾರು ೨೦೦ ಇರಬಹುದು. ಅವೆಲ್ಲವುಗಳನ್ನು ಒಬ್ಬನೆ ಮನುಷ್ಯನು ಅರಿತಿರುವದು ಸಾಧ್ಯವಿಲ್ಲ. ಹಾಗೆ ಅರಿಯಬೇಕಾದರೆ ಇಡೀ ಜೀವನವನ್ನೆಲ್ಲ ಬರೀ ಭಾಷೆಗಳನ್ನು ಕಲಿಯುವುದರಲ್ಲಿಯೆ ಕಳೆಯಬೇಕಾದೀತು. ಅದು ಬರೀ ಕಷ್ಟ ಸಾಧ್ಯವಷ್ಟೇ ಅಲ್ಲ, ಅಶಕ್ಯವೂ ಅವ್ಯವಹಾರ್ಯವೂ ಅಯೋಗ್ಯವೂ ಇರುವದು. ಸಾಮಾನ್ಯತಃ ಮನುಷ್ಯನು ತಾನು ಯಾವ ಪ್ರದೇಶದಲ್ಲಿ ಇಲ್ಲವೆ ಪ್ರಾಂತದಲ್ಲಿರುವನೊ ಯಾವ ಜನರಲ್ಲಿ ವಾಸಿಸುವನೊ ಆಯಾ ಭಾಷೆಯನ್ನು ಚನ್ನಾಗಿ ಕಲಿತು ಕೊಂಡರೆ ಸಾಕಾಗುವದು. ಭಾಷೆ, ಭಾಷಾಶಾಸ್ತ್ರ, ಭಾಷೆಯ ವ್ಯುತ್ಪತ್ತಿ ಮುಂತಾದವುಗಳ ಅಭ್ಯಾಸ ಮಾಡುವ ಪಂಡಿತರು ಇಲ್ಲವೆ ವಿಜ್ಞಾನಾದಿಗಳನ್ನು ಅಭ್ಯಸಿಸುವರು ದೇಶಪರ್ಯಟಕರು ಹೆಚ್ಚು ಭಾಷೆಗಳನ್ನು ಕಲಿತರೆ ಕಲಿ

ಯಬಹುದು ಸುಮಾರು ೪೦ ಭಾಷೆಗಳನ್ನು ಕಲಿತ ಪಂಡಿತರು ಹಲವರಿರುವರು. ಜನಸಾಮಾನ್ಯರು ಬಹುಶಃ ಒಂದೇ ಭಾಷೆ ಗೊತ್ತಿದ್ದವರು, ಒಂದೇ ಭಾಷೆ ಕಲಿಯುಲಿನವರಿರುವರು. ಅವಶ್ಯವಿದ್ದಾಗ ಹೆಚ್ಚು ಭಾಷೆಗಳನ್ನು ಕಲಿಯುವದು ಜಾಣತನದ್ದಿದ್ದರೂ ಅನವಶ್ಯಕವಾಗಿ ಭಾಷೆಗಳನ್ನು ಕಲಿಯುತ್ತ ಹೋಗುವದು ಸಮಂಜಸವಾಗಲಾರದು. ಅದು ಕಾಲಾಪವ್ಯಯವೆ ಸೈ. ಈ ಬಗೆಯ ವ್ಯಾವಹಾರಿಕ ದೃಷ್ಟಿಯಿಂದಲೆ ಭಾಷೆ, ಲಿಪಿ ಮುಂತಾದವುಗಳತ್ತ ನಾವು ನೋಡುವದು ಅವಶ್ಯ.

ಭಾಷೆಯೆಂಬುದು ಸಾಧನ ಮಾತ್ರವು. ಮನುಷ್ಯನ ಪ್ರಗತಿ, ಮನುಷ್ಯನ ವಿಕಾಸ, ಶಾಂತಿ, ಸುಖ, ಜ್ಞಾನ, ತೇಜ ಇವುಗಳತ್ತ ವಿಕಾಸ ಇದೇ ಸಾಧ್ಯವು. ಈ ವಿಕಾಸ ಮಾರ್ಗದಲ್ಲಿ ಭಾಷೆಯು ದೊಡ್ಡ ಸಾಧನವು. ಅದು ಸುಲಭವೂ ಸಹಜವೂ ಸುಂದರವೂ ಇದ್ದಷ್ಟು ನಮ್ಮ ವೇಳೆ ಶಕ್ತಿಗಳ ಅಪವ್ಯಯವಾಗದೆ, ನಾವು ಪ್ರಗತಿ ಪಥದಲ್ಲಿ ಸಾಗಬಲ್ಲೆವು. ಹರುಕು ಮುರುಕು, ಕೊರಟು ಮುರುಟು ಸಾಧನವಿದ್ದರೆ ಸಾಧ್ಯದತ್ತ ಬೇಗ ಸಾಗುವದು ಕಠಿಣವಾಗುವದು. ಮೇಲಾಗಿ ಭಾಷೆಯು ಕೇವಲ ವೈಯ್ಯಕ್ತಿಕ ಜೀವನದ ಅಥವಾ ವಿಕಾಸದ ಸಾಧನವಷ್ಟೇ ಅಲ್ಲ. ಅದು ಸಾಮೂಹಿಕ, ಸಾಂಘಿಕ, ಸಾಮಾಜಿಕ ಜೀವನ ವಿಕಾಸದ ಸಾಧನವಿರುವದು. ಒಬ್ಬನೆ ಇರುವಲ್ಲಿ ಇಬ್ಬರು ಒಂದೆಡೆ ಬಂದೊಡನೆ ಭಾಷೆಯ ಅವಶ್ಯಕತೆಯುಂಟಾಗುವದು. ವಿದ್ಯುತ್ಪ್ರವಾಹವು ಒಂದೆಡೆಯಿಂದ ಇನ್ನೊಂದೆಡೆ ಹೋಗಲು ಆಕಾಶದ ಆಧಾರವು ಬೇಕಾಗುವಂತೆ, ನೀರು ಒಂದು ಬದಿಯಿಂದ ಇನ್ನೊಂದು ಬದಿ ಹರಿಯಬೇಕಾದರೆ ಕಾಲುವೆ ಬೇಕಾಗುವಂತೆ, ವಿಚಾರವಾಹನಕ್ಕೆ ಭಾಷೆ ಬೇಕು. ಆ ಭಾಷೆ ಉತ್ತಮವೂ ಪರಸ್ಪರರಿಗೆ ಚನ್ನಾಗಿ ತಿಳಿಯುವಂತಹದೂ ಯಾವದೆ ಅಡಚಣಿಯನ್ನುಂಟು ಮಾಡದೆ ಇರುವಂತಹದೂ ಇದ್ದರೆ ಪರಸ್ಪರ ಬಳಕೆಯ ಕೆಲಸವು ಸುಕರವಾಗುವದು.

ಅಂಥ ಭಾಷೆಯಾವುದು, ಅದು ಹೇಗಿರಬೇಕು, ಅದರ ಲಕ್ಷಣಗಳೇನು ?

ತಾಯಿ ತನ್ನ ಮೊಲೆ ಹಾಲುಣಿಸಿ ಮಗುವನ್ನು ಬೆಳೆಸುವಳು. ಆ ಹಾಲಿನೊಡನೆಯೆ ಮಗುವಿಗೆ ಮುದ್ದು ಮಾತುಗಳನ್ನು ಕಲಿಸುವಳು. ಆ

ಮಾತುಗಳಿಂದ ಮಗುವಿಗೆ ಜಗತ್ತಿನ ಗುರುತಾಗುವದು. ಅದೇ ಕೂಸು ಕಲಿಯುವ ಮೊದಲು ಮಾತುಗಳು. ಅದೇ ಭಾಷೆಯೊಡನೆ ಮಗುವಿನ ಪ್ರಥಮ ಪರಿಚಯ. ಆ ಮಾತುಗಳಲ್ಲಿ ಒಂದು ಸಹಜತೆ, ಸ್ವಾಭಾವಿಕತೆ, ಮೂಲಭೂತ ಭಾವನೆಗಳ ನೈಸರ್ಗಿಕ ಪ್ರತಿಬಿಂಬ ಇರುವದು ಅದೇ ತಾಯ್ನುಡಿ ಅಥವಾ ಮಾತೃಭಾಷೆ ಎನಿಸುವದು. ಒಂದೇ ಮಾತೃಭಾಷೆಯುಳ್ಳವರು ಅತಿ ದೊಡ್ಡ ಪ್ರಮಾಣದಲ್ಲಿ ಬಹುಸಂಖ್ಯರಾಗಿ ಯಾವ ಪ್ರಾಂತದಲ್ಲಿರುವರೊ ಆ ಪ್ರಾಂತದಲ್ಲಿ ಆ ಭಾಷೆಯೆ ಪ್ರಾಂತ ಭಾಷೆಯಾಗುವದು. ಅಂಥಲ್ಲಿ ಜನರ ಸ್ವಭಾಷೆ, ಪ್ರಾದೇಶಿಕ ಭಾಷೆ, ಪ್ರಾಂತ ಭಾಷೆ ಒಂದೇ ಇರುವದು. ಆಯಾ ಪ್ರಾಂತದ ವಾತಾವರಣದಲ್ಲಿ ಅದೇ ನುಡಿಯ ನಿನಾದವು ಸ್ವಾಭಾವಿಕವಾಗಿಯೆ ತುಂಬಿಕೊಂಡಿರುವದು. ಅದೇ ಭಾಷೆಯ ಬಿಂಬವು ಎಲ್ಲೆಲ್ಲಿಯೂ ಕಾಣುವದು. ಆ ಭಾಷೆಯ ಉಪಭಾಷೆಗಳು ಅಥವಾ ಬಾಯಿ ಭಾಷೆಗಳು ಹಲವು ಇರಬಲ್ಲವು. ಅವು ಒಂದೇ ಗಿಡದ ಟೊಂಗೆಗಳಂತೆ, ಒಂದೇ ನದಿಯ ಶಾಖೆಗಳಂತೆ ಒಂದಕ್ಕೊಂದು ಹೊಂದಿಕೊಂಡು ಇರುವವು.

ಆಯಾ ಪ್ರಾಂತದ ಜನರ ನಿತ್ಯವ್ಯವಹಾರಾದಿಗಳು ಪ್ರಾಂತೀಯ ಭಾಷೆಯಲ್ಲಿಯೆ ನಡೆಯುವವು. ಅಲ್ಲದೆ ಅವರ ಇತಿಹಾಸ, ಪರಂಪರೆ, ಸಂಸ್ಕೃತಿ, ಜ್ಞಾನಭಾಂಡಾರ, ಅನುಭವ, ಜಾಣತನ, ಇವೆಲ್ಲ ಹಾಗೂ ಅವರ ದೋಷ ಶೋಷಗಳು ಸಹ ಆಯಾ ಭಾಷೆಯ ವಿವಿಧ ವಾಙ್ಮಯದಲ್ಲಿ ಅಡಕವಾಗಿರುವದು ಸ್ವಾಭಾವಿಕ. ಅದೆಲ್ಲ ಆಯಾ ಪ್ರಾಂತದಲ್ಲಿ ಹುಟ್ಟಿ ಬೆಳೆದವನ ಸೊತ್ತು. ಆ ಎಲ್ಲ ಬೊಕ್ಕಸದ ಕೀಲಿಕೈ ಆ ಭಾಷೆಯ ಮೂಲಕವೆ ದೊರೆಯುವದು ಗಣ್ಯವಾದ, ಸಂಸ್ಮರಣಿಯವಾದ ಯಾವದೆ ಮಾತನ್ನು ಆಯಾ ಪ್ರಾಂತದ ಲೇಖಕರು ತಮ್ಮ ಭಾಷೆಯಲ್ಲಿ ಬರೆದಿಡದೆ ಇರಲಾರರು. ಸಾಕಷ್ಟು ಮಹತ್ವದ ಮತ್ತು ಸುಂದರ ವಾಙ್ಮಯವನ್ನು ಯಾವ ಜನಾಂಗದವರೂ ಅಳಿಯಗೊಡಲಾರರು. ವೇದರಚನೆಯಾದಾಗ ಇನ್ನು ಬರೆಹದ ಕಲೆ ಹುಟ್ಟಿರಲಿಲ್ಲವಂತೆ. ಆದರೂ ಚಾಚೂ ತಪ್ಪದೆ ಕಂಠಸ್ಥ ಮಾಡಿ ಆಗಿನ ಜನರು ಸುಮಾರು ಸಾವಿರ ವರುಷಗಳ ವರೆಗೆ ಅವನ್ನು ಸಂರಕ್ಷಿಸಿ ಪೀಳಿಗೆಯಿಂದ ಪೀಳಿಗೆಗೆ ಅಮೌಲ್ಯವಾದ ಧನವೆಂದು ಕೊಡುತ್ತ ಬಂದರು, ಎಂದು ಪಂಡಿತರು ಹೇಳುವರು. ತಾತ್ಪರ್ಯವೇನಂದರೆ, ಯಾವ ಅಪಾರ ಜ್ಞಾನ ಅನುಭವಾದಿಗಳನ್ನು ವ್ಯಕ್ತಿ

ಗಳು ತಮ್ಮ ಚಿಕ್ಕ ಮಿದುಳಿನಲ್ಲಿ ಬಹುಕಾಲ ದೊಡ್ಡ ಪ್ರಮಾಣದಲ್ಲಿ ಸಂಗ್ರಹಿಸಿಡುವದು ಅಸಾಧ್ಯವೊ ಅವುಗಳನ್ನೆಲ್ಲ ಒಂದು ಭಾಷೆಯು ಸಾವಿರಾರು ವರುಷಗಳವರೆಗೆ ವಾಙ್ಮಯರೂಪದಿಂದ ಕಾದಿಡಬಲ್ಲದು. ಒಂದು ಪ್ರಾಂತದ ಇಲ್ಲವೆ ಜನಾಂಗದ ವಾಙ್ಮಯವೆಂದರೆ ಆಯಾ ಜನರ ಅನೇಕ ಪೀಳಿಗೆಗಳ ವಿಚಾರ ಮತ್ತು ಅನುಭವ ಪರಂಪರೆಗಳ ನಿಘಂಟು ಅಥವಾ ಸಂದರ್ಭಗ್ರಂಥ ಎಂದರೂ ಸಲ್ಲುವದು. ವೇದೋಪನಿಷತ್ತುಗಳ ಕಾಲದ್ದ ಜನರ ಜ್ಞಾನವು, ಅವರ ಪೂರ್ವಾಪರ, ಸುಖ ದುಃಖ, ಸ್ವಭಾವ, ವಿಚಾರ ವ್ಯವಹಾರ ಇತ್ಯಾದಿ, ಆ ಗ್ರಂಥಗಳ ಅಭ್ಯಾಸದಿಂದಲೆ ಆಗುವದು. ಈಗ ಉಸುಬಿನ ಕೆಳಗೆ ನೂರಾರು ಅಡಿ ಹುಗಿದುಹೋದ ಬ್ಯಾಬಿಲೋಲ, ನಿಂನೇವಾ ಮುಂತಾದ ಪಟ್ಟಣಗಳ ರಹಿವಾಸಿಗಳ ಸ್ಥಿತಿಗತಿ, ರೀತಿ ನಡತೆಗಳು, ಮಿಸರ ದೇಶದ ಜೀವನಾಂಶಗಳು ಅವರವರ 'ಬಾಣ ಭಾಷೆ' (ಕುನಿಫಾರ್ಮ,) 'ಚಿತ್ರಭಾಷೆ' (ಹಾಯರೊಗ್ಲಿಫ್) ಗಳ ಸಾಧನದಿಂದಲೆ ನಮಗೆ ತಿಳಿಯುವವು. ಭಾಷೆ ರೂಪುಗೊಂಡು ಗ್ರಂಥಸ್ಥವಾಯಿತೆಂದರೆ ಅದು ಇಷ್ಟೆಂದು ಮಹತ್ವದಾಗುವದು.

ಭಾಷೆಯೆಂಬುದು ಸ್ವವಿಚಾರ ಪ್ರಕಾಶನದ, ವಿಚಾರವಿನಿಮಯದ, ವಿಚಾರವಿಮರ್ಶೆಯ, ವಿಕಾಸದ, ಸಾಮಾಜಿಕ ಜೀವನದ, ಜ್ಞಾನಸಂಗ್ರಹದ ಉತ್ತಮ ಸಾಧನವೆಂಬ ಮಾತು ನಿಜ. ಅದೇ ಕಾಲಕ್ಕೆ ಸ್ವಭಾಷೆಯು ಅಂಥ ಉತ್ತಮೋತ್ತಮ ಸಾಧನವಾಗಬಲ್ಲವೆಂಬುದನ್ನು ನಾವು ಲಕ್ಷದಲ್ಲಿಡಲಿಕ್ಕೆ ಬೇಕು. ರವೀಂದ್ರನಾಥ ಟಾಗೋರರಂಥ ಶಿಕ್ಷಣಪಟುಗಳು, ಗಾಂಧೀಜಿಯವರಂಥ ವಿಚಾರಪರಾಯಣರು, ಪಂಡಿತ ಜವಾಹರಲಾಲರಂಥ ಉಜ್ವಲ ದೇಶಭಕ್ತರು ಪ್ರಾಂತೀಯ ಭಾಷೆಗಳ ಮಹತಿಯನ್ನು ವಿಧವಿಧದಿಂದ ಬಣ್ಣಿಸಿರುವರು. ಶಿಕ್ಷಣದ ಮಾಧ್ಯಮವನ್ನು ಇಂಗ್ಲಿಷ ಮಾಡದೆ ಪ್ರಾಂತಿಯ ಭಾಷೆಗಳನ್ನೆ ಮಾಡಬೇಕೆಂದು ಹೇಳುವಾಗ ಡಾ. ಮೆಕಂಝಿ, ಡಾ. ಅಮರನಾಥ ಝಾ, ರೆ. ಹಾಲಂಡ, ಮಿ. ವರ್ಡ್ಸವರ್ಥ ಮುಂತಾದವರು ಈ ವಿಷಯವನ್ನು ಬಹಳ ಒತ್ತಿಹೇಳಿರುವರು ಸರಕಾರದವರು ನೇಮಿಸಿದ ಸ್ಯಾಡಲರಕಮಿಶನ್, ಹಾರ್ಟಾಗ್ ಕಮಿಶನ್, ಆ್ಯಬಟ್‌ವುಡ್ ಕಮಿಟಿ ಮುಂತಾದವರು ಸಹ ಪ್ರಾಂತೀಯ ಭಾಷೆಯನ್ನೆ ಮಾಧ್ಯಮ ಮಾಡಬೇಕು, ಇಲ್ಲದೆಹೋದರೆ ವಿದ್ಯಾರ್ಥಿ

ಗಳ ಶಕ್ತಿಯ ಅಪವ್ಯಯವಾಗುವದು, ವಿಕಾಸಶಕ್ತಿ ಕುಂಠಿತವಾಗುವದು ಎಂದು ಸ್ಪಷ್ಟವಾಗಿ ಹೇಳಿರುವರು. ನಮ್ಮ ಮಿದುಳಿನಲ್ಲಿ ಸ್ಫೂರ್ತಿಯಿಂದ ಮಿಂಚಿನಂತೆ ಹೊಳೆಯುವ ಹೊಸ ವಿಚಾರಗಳು, ನಮ್ಮ ಅಂತಃಕರಣದಲ್ಲಿ ಪ್ರಸಂಗವಶಾತ್ ಉಕ್ಕಿ ಬರುವ ಭಾವನೆಗಳು ನಮ್ಮ ಸ್ವಭಾಷೆಯಲ್ಲಿಯೆ ಬರಬಲ್ಲವು. ಎಚ್. ಎನ್. ಬ್ರೇಲ್ಸಫರ್ಡ ಎಂಬ ಪ್ರಸಿದ್ಧ ಇಂಗ್ಲೀಷ ಲೇಖಕನು ಇದೇ ಮಾತನ್ನು ಹೇಳುವಾಗ, 'ನಮ್ಮ ಭಾವನೆಗಳನ್ನು ನಿಜವಾಗಿ ಒಂದೇ ಒಂದು ಭಾಷೆಯಲ್ಲಿ ಚನ್ನಾಗಿ ಚಿತ್ರಿಸಬಲ್ಲೆವು, ಅದೆಂದರೆ ಸ್ವಭಾಷೆ. ಒಂದೇ ಭಾಷೆಯ ಸೂಕ್ಷ್ಮ ಗರ್ಭಿತಾರ್ಥ, ಸೂಚಿತಾರ್ಥ, ಮುಂತಾದವುಗಳು ನಮಗೆ ಪೂರ್ಣವಾಗಿ ತಿಳಿಯಬಲ್ಲವು. ಆ ಭಾಷೆಯೆಂದರೆ ನಮ್ಮ ಮಾತೃಭಾಷೆ. ತಾಯಿಯ ತೊಡೆ ಯಲ್ಲಿರುವಾಗ ತೊದಲುತ್ತ ಕಲಿತ ಭಾಷೆಯದು. ಅದು ನಮ್ಮ ಪ್ರಾರ್ಥನೆಯ ಭಾಷೆ, ದೇವರಿಗೆ ಮೊರೆಯಿಡುವ ಭಾಷೆ. ನಮ್ಮ ಸುಖದುಃಖದ ಪ್ರಥಮ ಅಭಿವ್ಯಕ್ತಿಯು, ನಮ್ಮ ಭಾವನೆಗಳ ಪ್ರಥಮ ಸ್ಫೋಟವು ನಮ್ಮ ತಾಯ್ನುಡಿ ಯಲ್ಲಿಯೆ ಆಯಿತು. ಆ ಭಾಷೆ ಬಿಟ್ಟು ಇನ್ನಾವುದನ್ನಾದರೂ ಬೋಧ ಭಾಷೆ ಮಾಡಲೆತ್ನಿಸುವುದೆಂದರೆ ವಿದ್ಯಾರ್ಥಿಗಳನ್ನು ಹೈರಾಣಮಾಡಿದಂತೆ. ಇಷ್ಟೇ ಅಲ್ಲ ಅವರ ಮನಸಿನ ಸ್ವತಂತ್ರ ಹರಿದಾಟವನ್ನೆ ತಡೆದಂತೆ,' ಎಂದಿದ್ದಾನೆ. ಈ ಎಲ್ಲ ಮಾತುಗಳನ್ನು ಪರಿಶೀಲಿಸಿದರೆ ಪ್ರಾಂತಿಕ ಭಾಷೆಗಳನ್ನು ದುರ್ಲಕ್ಷಿಸ ವದು ಎಂಥ ಘೋರ ಅಪರಾಧವಿರುವದೆಂಬುದು ವ್ಯಕ್ತವಾಗುವದು.

ಹಿಂದುಸ್ತಾನದಲ್ಲಿಯ ಹಲವೊಂದು ಪ್ರಾಂತಿಕ ಭಾಷೆಗಳು ಈ ಕ್ಷಣಕ್ಕೆ ಸಾಕಷ್ಟು ಪುಷ್ಟವಿರಲಿಕ್ಕಿಲ್ಲ. ಹಾಗಿದ್ದ ಕ್ಷಣಕ್ಕೆ ನಾವು ಪರಕೀಯವಾದ ಇಂಗ್ಲೀಷ ಭಾಷೆಯನ್ನಪ್ಪಿಕೊಳ್ಳಲು ಹೋಗುವದು ತಪ್ಪು. ಮನೆಯವಳು ಮಾಡುವ ಅಡಿಗೆಗೆ ತಡವಿದ್ದರೆ ನಾವು ಸ್ವಲ್ಪ ಸಮಾಧಾನದಿಂದ ತಡೆಯ ಬೇಕು ಹೊರತು ನಂಬರ ಮನೆಗೆ ಊಟಕ್ಕೆ ಹೋಗುವದು ಸಮಂಜಸವಾಗ ಲಾರದು. ನಮ್ಮಲ್ಲಿಯ ಪ್ರಾಂತೀಯ ಭಾಷೆಗಳೆಲ್ಲ ಪ್ರಗತಿಶೀಲವೂ ಜೀವಂ ತವೂ ಇರುವವು. ನಿಜವಾಗಿ ನೋಡಿದರೆ ಜನರ ಬಾಯೊಳಗೆ ಇರುವ ಪ್ರತಿ ಯೊಂದು ಭಾಷೆಯು ಒಂದು ಜೀವಂತ ವಸ್ತು ಎಂದು ನಾವು ಭಾವಿಸಲು ಅಡ್ಡಿ ಇಲ್ಲ. ಆಯಾ ಜನರು ಎಷ್ಟು ಚಟುವಟಿಕೆಯುಳ್ಳವರೊ, ಜೀವಂತರೊ,

ವಿಕಸನ ಶೀಲರೊ ಅದೇ ಪ್ರಮಾಣದಲ್ಲಿ ಅವರ ಭಾಷೆ ಪ್ರಗತಿಪರವಿರುವದು. ನಿತ್ಯಉಪಯೋಗದ ಮೂಲಕ,ಅನ್ಯ ಭಾಷೆಗಳೊಡನೆ ಆಗುವ ತಿಕ್ಕಾಟ,ಬರುವ ಸಂಬಂಧಗಳ ಮೂಲಕ, ಹೊಸ ವಿಚಾರ ಮತ್ತು ಭಾವನೆಗಳ ಪ್ರಕಟನೆ ಗಾಗಿ ಹೊಸ ಶಬ್ದಗಳ ರಚನೆಯ ಅವಶ್ಯಕತೆಯ ಮೂಲಕ ಜೀವಂತ ಭಾಷೆ ಒಂದು ಹರಿಯುವ ನದಿಯಂತೆ ಇರುವದು. ಹೊಸ ಶಬ್ದನಿರ್ಮಾಣ, ಹೊಸ ಸಾಹಿತ್ಯರೂಪ ಧಾರಣ ಇವು ಭಾಷೆಯ ಜೀವಂತತನದ ಮುಖ್ಯ ಲಕ್ಷಣಗ ಳೆಂದು ಹೇಳಬಹುದು ಇವೆರಡಿಲ್ಲದೆ ಯಾವ ಭಾಷೆಯೂ ಬದುಕಿ ಬಾಳಲಾ ರದು, ಸ್ವಾವಲಂಬಿಯಾಗಲಾರದು; ಮುಂದಡಿಯಿಡುವದಂತೂ ದೂರವೆ ಉಳಿಯಿತು.

## ಭಾಷಾನ ಗುಣ ಪ್ರಾಂತ.

ಜೀವನದಲ್ಲಿ ಭಾಷೆಗೆ ಇದ್ದ ಶ್ರೇಷ್ಠಸ್ಥಾನ, ಹಿಂದುಸ್ತಾನದಲ್ಲಿ ಜೀವಂತ ವಿರುವ ಪ್ರಾಂತೀಯ ಭಾಷೆಗಳ ಮಹತ್ವ, ಆಯಾ ಜನರ ವಿಕಾಸ ಆಯಾ ಭಾಷೆಗಳ ಮುಖಾಂತರವೆ ಆಗುವದು ಸ್ವಾಭಾವಿಕ ಎಂಬ ಎಲ್ಲ ಮಾತುಗ ಳನ್ನು ಲಕ್ಷಿಸಿ ಕಾಂಗ್ರೆಸ್ಸು ತನ್ನ ಕಾರಭಾರದ ಮಟ್ಟಿಗೆ ಭಾಷಾನುಗುಣ ಪ್ರಾಂತಗಳನ್ನು ೧೯೨೦ರಲ್ಲಿ ಮಾಡಿಯೆಬಿಟ್ಟಿತು. ಸ್ವರಾಜ್ಯದಲ್ಲಿ ಭಾಷಾ ನುಗುಣ ಪ್ರಾಂತ್ರಗಳೇ ಏರ್ಪಡಬೇಕು ಎಂದು ಅದು ಸಾರಿತು. ತಾನು ಮಾಡಿದ ಸ್ವರಾಜ್ಯ ಘಟನೆಯಲ್ಲಿ ಆ ರೀತಿ ಇರಬೇಕೆಂದು ಪ್ರಚಾರಮಾಡಿತು. ಕೇವಲ ಭೌಗೋಲಿಕ, ಆರ್ಥಿಕ, ರಾಜಕೀಯ ದೃಷ್ಟಿಯಿಂದ ಪ್ರಾಂತಗಳನ್ನು ಏರ್ಪಡಿಸುವನೆಂದರೆ ಬಹಳ ಕೃತ್ರಿಮವಾಗುವದು. ಪ್ರಾಂತವೆಂದರೆ ಅಲ್ಲಿರುವ ಗುಡ್ಡ, ಗಿಡ ಅಥವಾ ನದಿ, ಕೆರೆಯಲ್ಲ, ಅಲ್ಲಿಯ ಬೆಳೆ ಖನಿಜಗಳಲ್ಲ. ಪ್ರಾಂತ ವೆಂದರೆ ಅಲ್ಲಿಯ ಜನರು. ಅವರಲ್ಲಿ ಒಂದು ಬಗೆಯ ಏಕೋಭಾವ, ಸಮರ ಸತೆ, ವಿಚಾರಗಳ ಏಕರೂಪತೆ ನೆಲೆಗೊಳ್ಳಬೇಕಾದರೆ ಏಕ ಭಾಷೆಯೆ ಆ ಕೆಲಸಕ್ಕೆ ಉಪಕಾರಕರವಾಗಬಲ್ಲದು. ಒಂದು ಪ್ರಾಂತದ ಶಿಕ್ಷಣ, ವ್ಯವಹಾರ, ರಾಜ್ಯಕಾರಭಾರ, ಸಭೆಸಮ್ಮೇಲನಾದಿ ಸಾರ್ವಜನಿಕ ಚಟುವಟಿಕೆಗಳು ಎಲ್ಲ ಸುಸೂತ್ರ ಸಾಗಬೇಕಾದರೆ, ಅವೆಲ್ಲವುಗಳಲ್ಲಿ ಅಲ್ಲಿಯ ಜನಸಾಮಾನ್ಯರು ರುಚಿಗೊಂಡು ಭಾಗವಹಿಸಬೇಕಾದರೆ, ಅಲ್ಲಿಯ ಜನರು ಒಂದೇ ಭಾಷೆಯವರಿ

ದ್ದರೆಯೆ ಅನುಕೂಲ. ಹೀಗಾದರೆ ಮಾತ್ರ ಅಲ್ಲಿ ನಿಜವಾದ ಲೋಕಸತ್ತೆ ನೆಲೆಗೊಳ್ಳಬಲ್ಲದು. ಈ ಎಲ್ಲ ಮಾತುಗಳನ್ನು ಅನುಲಕ್ಷಿಸಿಯೆ ಕಾಂಗ್ರೆಸ್ಸು ಭಾಷಾನುಗುಣ ಪ್ರಾಂತರಚನೆಯ ಫಲವನ್ನು ತೊಟ್ಟಿದೆ.

## ಕನ್ನಡ ಭಾಷೆ

ಭಾಷೆ, ಪ್ರಾಂತ ಭಾಷೆ, ಭಾಷಾನುಗುಣ ಪ್ರಾಂತ ಇವುಗಳ ಮಹತ್ವವನ್ನು ಹೇಳಿದ್ದಾಯಿತು. ಇನ್ನು ಕರ್ನಾಟಕ ಪ್ರಾಂತದ ಭಾಷೆಯಾದ ಕನ್ನಡದ ಬಗ್ಗೆ ನಾಲ್ಕು ಮಾತು ಹೇಳುವದಶ್ಯ. ಆಮೇಲೆ ಪ್ರತಿಯೊಂದು ಪ್ರಾಂತೀಯ ಭಾಷೆಯ ಬಗ್ಗೆ ಆಯಾ ಪ್ರಾಂತದವರ ಕರ್ತವ್ಯವನ್ನು ಹೇಳುವ ದೃಷ್ಟಿಯಿಂದ ಕನ್ನಡದ ಬಗ್ಗೆ ನಮ್ಮ ನಮ್ಮ ಕರ್ತವ್ಯದ ದಿಗ್ದರ್ಶನವನ್ನು ಇಲ್ಲಿ ಮಾಡುವ ವಿಚಾರವಿದೆ.

ಹಿಂದುಸ್ತಾನದಲ್ಲಿ ಬಹಳವೆಂದರೆ ೧೫ ಮುಖ್ಯ ಪ್ರಾಂತಿಕ ಭಾಷೆಗಳಿವೆ. ಅವುಗಳಲ್ಲಿ ಕನ್ನಡವು ಬಹಳ ಹಳೆಯದು. ಇದಕ್ಕೆ ಕನಿಷ್ಟ ಎರಡು ಸಾವಿರ ವರುಷಗಳ ಇತಿಹಾಸವು ಇರುವದು. ಈ ರಾಷ್ಟ್ರದಲ್ಲಿ ಎರಡು ವರ್ಗದ ಭಾಷೆಗಳಿವೆ. ಒಂದು ದ್ರಾವಿಡ ವರ್ಗ, ಇನ್ನೊಂದು ಸಂಸ್ಕೃತ ವರ್ಗ. ಕನ್ನಡ, ತಮಿಳು, ತೆಲುಗು, ಮತ್ತು ಮಲಯಾಳಿ ಈ ದಕ್ಷಿಣ ಹಿಂದುಸ್ತಾನದ ನಾಲ್ಕು ಭಾಷೆಗಳು ದ್ರಾವಿಡ ವರ್ಗಕ್ಕೆ ಸೇರಿದವುಗಳು. ಉಳಿದವೆಲ್ಲ ಹೆಚ್ಚುಕಡಿಮೆ ಸಂಸ್ಕೃತ ವರ್ಗಕ್ಕೆ ಸೇರಿದವುಗಳು. ಕನ್ನಡವು ತನ್ನ ಭಾಷಾಸಹೋದರಿಯರಿಂದ ಅನೇಕ ಶಬ್ದಗಳನ್ನೆತ್ತಿದ್ದಲ್ಲದೆ ಸಂಸ್ಕೃತದಿಂದ ಚನ್ನಾಗಿ ಪುಷ್ಟಿಪಡೆದಿದೆ ಕನ್ನಡವು ಸಂಸ್ಕೃತಜನ್ಯವಲ್ಲದಿದ್ದರೂ ಸಂಸ್ಕೃತಪುಷ್ಟವಿರುವದೆಂಬಲ್ಲಿ ಸಂಶಯವಿಲ್ಲ. ಈ ಹೊತ್ತು ಯಾವದೆ ಧಾರ್ಮಿಕ, ಸಂಸ್ಕೃತಿಕ, ವೈಜ್ಞಾನಿಕ ವಿಚಾರಗಳನ್ನು ನಾವು ವ್ಯಕ್ತಗೊಳಿಸಬೇಕಾಗಿದ್ದರೆ, ನೂರಕ್ಕೆ ಅರವತ್ತಕ್ಕಿಂತ ಹೆಚ್ಚು ಸಂಸ್ಕೃತ ತತ್ಸಮ ಇಲ್ಲವೆ ತದ್ಭವ ಶಬ್ದಗಳನ್ನು ಉಪಯೋಗಿಸಬೇಕಾಗುವದು ನಮ್ಮ ವ್ಯಾಕರಣ ಕೆಲ ಮಟ್ಟಿಗೆ ಬೇರೆ ಇದ್ದರೂ ಅದನ್ನು ಬರೆಯುವ ರೀತಿ, ಅಲಂಕಾರ ಶಾಸ್ತ್ರ, ನಮ್ಮ ಛಂದಸ್ಸಿನ ಬಹುಭಾಗ, ಶೈಲಿ, ಸಾಹಿತ್ಯರೂಪಗಳು ಮುಂತಾದವು ಸಂಸ್ಕೃತದಿಂದ ಎತ್ತಿದವುಗಳು. ಕಂದ, ಷಟ್ಪದಿ, ಚೌಪದಿ, ತ್ರಿಪದಿ, ರಗಳೆ ಮುಂತಾದ ಹಲವು ಬಿಟ್ಟರೆ ಅನೇಕ ವೃತ್ತ

ಮುಂತಾದವುಗಳಿಲ್ಲ. ನಾಟಕ, ಮಹಾಕಾವ್ಯ, ಚಂಪೂ ಇತ್ಯಾದಿ ಸಾಹಿತ್ಯ ರೂಪಗಳಿಲ್ಲ ಶುದ್ಧ ಸಂಸ್ಕೃತದಿಂದ ಕೊಂತವುಗಳು. ತವರುಮನೆಯ ವಸ್ತುಗಳನ್ನು ಪಡೆಯಲು ಮಗಳಿಗೆ ಯಾವದೇ ಬಗೆಯ ಸಂಕೋಚವಿರಲಾರದು. ಅಂದಬಳಿಕ ಸಂಸ್ಕೃತದಿಂದ ಬೇಕಾದ ಮಾತುಗಳನ್ನೆತ್ತಲು ಕನ್ನಡಕ್ಕೆ ಸಂಕೋಚವೇಕೆ ? ಮುಂದೆ ಪರ್ಶಿಯನ್ ಅಥವಾ ಫಾರಸೀ ಭಾಷೆಯ ಸಂಬಂಧ ಬಂದಾಗ ನಾವು ಹಲವು ಉರ್ದು, ಅರಬೀ, ಫಾರಸೀ ಶಬ್ದಗಳನ್ನು ಆತ್ಮಸಾತ್ ಮಾಡಿಕೊಂಡೆವು. ಜರೂರ, ದರಬಾರ, ಜಮೀನ, ಕಚೇರಿ, ದವಾಖಾನೆ, ಫೌಜದಾರ, ಅರ್ಜಿ ಇತ್ಯಾದಿ ತೀರ ರೂಢಿಯಲ್ಲಿರುವ ಶಬ್ದಗಳು ಆಬಗೆಯವು. ಮರಾಠಿಯಂತೂ ನಮ್ಮ ನೆರೆ ಭಾಷೆ. ಈಗ ಸದ್ಯಕ್ಕೆ ಇಂಗ್ಲೀಷ ಭಾಷೆಯೊಡನೆ ನಮ್ಮ ರಾಜಕೀಯ ದಾಸ್ಯದ ಮೂಲಕ ಬಹಳ ಸಂಬಂಧ ಬಂದಿದೆ. ಆಕಾರಣದಿಂದ ಅದರಿಂದಲೂ ನಾವು ಅನೇಕ ಶಬ್ದಗಳನ್ನೂ ಸಾಹಿತ್ಯರೂಪಗಳನ್ನು ಪಡೆದಿದ್ದೇವೆ, ಪಡೆಯುತ್ತಲಿದ್ದೇವೆ· ಸ್ಟೇಶನ್, ಸಿನೇಮಾ, ಇಂಜಿನ್, ಮೋಟರ, ಆಸ್ಪತ್ರಿ ಮುಂತಾದ ಶಬ್ದಗಳನ್ನು ನಮ್ಮವನ್ನಾಗಿ ಮಾಡಿಕೊಂಡಿದ್ದೇವೆ. ಈ ಬಗೆಯ ಉಪಕ್ರಮದ ಮೂಲಕ ನಮ್ಮ ಭಾಷೆ ಕೆಟ್ಟಿದೆ ಎಂದು ತಿಳಿಯುವದಾಗಲಿ, ದುರ್ಬಲವಿದೆ ಎಂದು·ಭಾವಿಸುವದಾಗಲಿ ತಪ್ಪಾಗುವದು. ಯಾಕಂದರೆ ಈ ಪದ್ಧತಿಯು ಅತ್ಯಂತ ಸ್ವಾಭಾವಿಕವು. ಎಲ್ಲ ಜೀವಂತ ಭಾಷೆಗಳೂ ಈ ಮಾತನ್ನೆ ಮಾಡೇ ಮಾಡುತ್ತವೆ. ಪ್ರಮಾಣದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇರಬಹುದು. ಸ್ವಭಾಷೆಯಲ್ಲಿ ಹೊಸ ಶಬ್ದಗಳನ್ನು ನಿರ್ಮಾಣಮಾಡುವ ಸಾಮರ್ಥ್ಯವನ್ನು ಕುಗ್ಗಿಸದೆ ಕಳಕೊಳ್ಳದೆ, ಅವಶ್ಯವಾದ ಅಥವಾ ಸ್ವಾಭಾವಿಕವಾಗಿ ಪ್ರಯತ್ನವಿಲ್ಲದೆ ಬೇರೆ ಭಾಷೆಗಳಲ್ಲಿಯ ಶಬ್ದಗಳನ್ನು ಉಪಯೋಗಿಸುವದು ಅನಿವಾರ್ಯವೂ ಕ್ರಮಪ್ರಾಪ್ತವೂ ಇರುವದು.

ಕನ್ನಡ ಭಾಷೆಯ ಭೂತಕಾಲವು ಅತ್ಯಂತ ಉಜ್ವಲವಿರುವದೆಂಬದು ಅದರ ಇತಿಹಾಸದ ಮೇಲಿಂದ ಸಹಜವಾಗಿ ತಿಳಿಯುವಂತಿದೆ. ಕದಂಬರ ಅಂದರೆ ೫ನೆಯ ಶತಮಾನದಿಂದ ಅದು ಒಂದೇ ಸವನಾಗಿ ಅನೇಕ ರಾಜವಂಶಗಳ ಭಾಷೆಯಾಮದರಿಂದ ಅದು ಕರ್ನಾಟಕದಲ್ಲಿ ರಾಜ ಭಾಷೆಯೂ

ಆಗಿತ್ತು. ಸಾವಿರಾರು ಶಿಲಾಲಿಪಿಗಳೂ ತಾಮ್ರಪಟಗಳೂ ಈ ಮಾತಿಗೆ ಸಾಕ್ಷಿಯಾಗಿವೆ. ನೃಪತುಂಗನನ್ನು ಮೊದಲುಮಾಡಿ ಈ ಹೊತ್ತಿನ ವರೆಗೆ ಉದ್ದಾಮ ಕವಿಶ್ರೇಷ್ಠರು ಕನ್ನಡದಲ್ಲಿ ಕಾವ್ಯವನ್ನು ನಿರ್ಮಾಣಗೊಳಿಸಿರುವರು. ವಚನಕಾರರು, ಹಾಗೂ ದಾಸಕೂಟದವರು ಧರ್ಮವಿಚಾರಗಳನ್ನು ಸವಿಗನ್ನಡ ದಲ್ಲಿ ಪಾಮರರಿಗೂ ಅರ್ಥವಾಗುವಂತೆ ಬೋಧಿಸಿರುವರು. ಬ್ರಿಟಿಶರು ಬಂದ ಬಳಿಕ ಕನ್ನಡ ಬೋಧಭಾಷೆ ಹೋಗಿ ಇಂಗ್ಲೀಷು ಆ ಸ್ಥಾನವನ್ನು ಆಕ್ರಮಿ ಸಿದ ನಂತರವೇ ಕನ್ನಡವು ಕುಗ್ಗಿತು. ಅದರ ಸ್ವಾಭಾವಿಕ ಓಜಸ್ಸು ಮರೆ ಯಾಯಿತು. ಈಗ ಪುನಃ ಸ್ವಭಾಷೆಯ ಬಗ್ಗೆ ನವಜಾಗ್ರತಿಯುಂಟಾದಂದಿ ನಿಂದ ಕನ್ನಡವು ತಲೆಯೆತ್ತುತ್ತಲಿದೆ. ಇದೇ ಪ್ರಗತಿ, ದ್ರುತಗತಿಯಿಂದ ಸಾಗಿ ದರೆ ಅದು ತನ್ನ ಪೂರ್ವ ವೈಭವವನ್ನು ಪಡೆಯುವದಲ್ಲದೆ ತನ್ನ ಸಹೋದರ ಭಾಷೆಗಳು ಯಾವ ಮಟ್ಟವನ್ನು ಮುಟ್ಟಬಹುದೊ ಅದೇ ಮಟ್ಟವನ್ನು ಸಹಜ ವಾಗಿ ಮುಟ್ಟಬಲ್ಲದು.

## ಪ್ರಾಂತಿಕ ಭಾಷೆಯ ಉಪಯೋಗ

ಕರ್ನಾಟಕದಲ್ಲಿ ಕನ್ನಡವೆ ಪ್ರಾಂತಿಕ ಭಾಷೆ. ಗುಜರಾಥದಲ್ಲಿ ಗುಜ ರಾಥಿ, ಆಂಧ್ರದಲ್ಲಿ ತೆಲಗು, ತಮಿಳುನಾಡಿನಲ್ಲಿ ತಮಿಳು, ಮಹಾರಾಷ್ಟ್ರದಲ್ಲಿ ಮರಾಠಿ ಇರುವಂತೆ ಪ್ರಾಂತದಲ್ಲಿಯ ಪ್ರಾಥಮಿಕ ಶಾಲೆಗಳ ಭಾಷೆ, ಬೋಧ ಭಾಷೆ, ವಿಶ್ವವಿದ್ಯಾಲಯದ ಭಾಷೆ, ವ್ಯಾಪಾರ-ಉದ್ಯೋಗ-ವ್ಯವಹಾರಗಳ ಭಾಷೆ, ಸಾರ್ವಜನಿಕ ಸಭೆ ಸಮ್ಮೇಲನಗಳ ಭಾಷೆ, ನಾಟಕ-ಗೀತ-ಸಂಗೀತಗಳ ಭಾಷೆ, ಸಂಸ್ಕೃತಿ ವಾಙ್ಮಯಗಳ ಭಾಷೆ, ರಾಜ್ಯಕಾರಭಾರದ ಭಾಷೆ, ಕೋರ್ಟು ಕಚೇರಿಗಳ ಭಾಷೆ ಪ್ರಾಧಾನ್ಯವಾಗಿ ಕನ್ನಡವೆ ಇರಲಿಕ್ಕೆಬೇಕು. ಅಂದರೆ ಮಾತ್ರ ನಮಲ್ಲಿಯ ಜನಸಾಮಾನ್ಯರ ವಿಕಾಸವು ಆಗಬಲ್ಲದು. ನಾಲ್ಕು ಬುದ್ಧಿ ಜೀವಿಗಳಿಗೆ ಅಥವಾ ಉಚ್ಚಶಿಕ್ಷಣ ಪಡೆದವರಿಗೆ ಯಾವ ಭಾಷೆಯಾದರೂ ಅನುಕೂಲವಾಗಬಹುದು. ಆದರೆ ಅದು ಜನಸಾಮಾನ್ಯರ ವಿಕಾಸಕ್ಕೆ ಸಹಾಯಕವಾಗಲಾರಿಯದು. ಅವರಿಗೆ ಯಾವದು ಉಪಕಾರಕ, ಅವರು ಭಾಗ ವಹಿಸಲು ಉತ್ತೇಜನವುಂಟಾಗಬೇಕಾದರೆ ಯಾವ ಭಾಷೆ ಅವಶ್ಯ ಇದನ್ನೆ ಮುಖ್ಯ ವಾಗಿ ನಾವು ನೋಡಲಿಕ್ಕೆಬೇಕು. ನಾವು ಕನ್ನಡ ಬಿಟ್ಟು ಇನ್ನಾವದೆ ಭಾಷೆ

ಯನ್ನು ಪಯೋಗಿಸಿದರೂ ಕರ್ನಾಟಕದ ಜನಸಾಮಾನ್ಯರು ಜೀವನದ ವಿವಿಧ ಚಟುವಟಿಕೆಗಳಲ್ಲಿ ರುಚಿಗೊಂಡು " ಭಾಗವಹಿಸಲಾರರು, ಹೊಣೆಗೊಂಡು ಕರ್ತ್ತವ್ಯರತಲಾಗಲಾರರು, ಪ್ರಜಾಪ್ರಭುತ್ವದ ತತ್ವದ ಪ್ರಕಾರ ತಮ್ಮ ಕಾರಭಾರ ವನ್ನು ತಾವೇ ತಿಳುವಳಿಕೆಯಿಂದ ನಡೆಸಿಕೊಂಡು ಹೋಗಲಾರರು.

'ಜನರಿಂದ, ಜನರಿಗಾಗಿ ನಡೆಸಲಾದ ಜನರ ಸರಕಾರವೆ ನಿಜವಾದ ಪ್ರಜಾಪ್ರಭುತ್ವ ಅಥವಾ ಜನಾಧಿಕಾರ' ಎಂದು ಅಬ್ರಾಹಾಮ ಲಿಂಕನ್ನನ ಪ್ರಸಿದ್ಧವಚನವಿರುವದು. ಇದು ಯಥಾರ್ಥವಾಗಬೇಕಾದರೆ ಎಲ್ಲ ರಾಜ್ಯಕಾರ ಭಾರ, ಶಾಸನಸಭೆಗಳ ವ್ಯವಹಾರ ಇವು ಪ್ರಾಂತಿಕ ಭಾಷೆಯಲ್ಲಿಯೆ ನಡೆಯ ಬೇಕು. ಇದು ಜನಸಾಮಾನ್ಯರ ಜನ್ಮಸಿದ್ಧ ಹಕ್ಕು ಇರುವದು. ಈ ಹಕ್ಕನ್ನು ಅವರಿಗೆ ಕೊಡದೆ ಇತರ ಹಕ್ಕುಗಳನ್ನು ಅವರಿಗೆ ಕೊಡುವದೆಂದರೆ ಕೈಕಟ್ಟಿ ಊಟಕ್ಕೆ ಕೂಡಿಸಿದಂತೆ, ಇಲ್ಲವೆ ಬಾಯಿಕಟ್ಟಿ ಮಾತಾಡಹೇಳಿದಂತೆ.

ನಮ್ಮ ಇತಿಹಾಸದಲ್ಲಿ ವಿಶೇಷತಃ ಧರ್ಮರಂಗದಲ್ಲಿ ಬುದ್ಧಭಗವಾನನು ಜನಸಾಮಾನ್ಯರ ಭಾಷೆಯ ಮಹತ್ವವನ್ನು ಕಂಡುಹಿಡಿದನೆಂದು ಹೇಳ ಬಹುದು. ಗಡಚಾದ ಪಂಡಿತಮನ್ಯ ಸಂಸ್ಕೃತ ಭಾಷೆಯನ್ನು ಪಯೋಗಿಸದೆ ಅವನು ತನ್ನ ಧರ್ಮೋಪದೇಶಕ್ಕಾಗಿ ಪಾಲಿ ಭಾಷೆಯನ್ನು ಜನರಲ್ಲಿ ರೂಢವಿದ್ದ ಒಂದು ಭಾಷೆಯನ್ನು ಉಪಯೋಗಿಸಿದನು. ಅವನ ಶಿಷ್ಯಪ್ರಶಿಷ್ಯರು ಅದೇ ಮಾರ್ಗವನ್ನವಲಂಬಿಸಿದರು. ಇದೇ ಗುಟ್ಟನ್ನರಿತು ಸಾಧುಸಂತರು ಜನ-ಸಾಮಾನ್ಯರ ಭಾಷೆಯ ಮುಖಾಂತರವೆ ಧರ್ಮನೀತಿಗಳ ಪ್ರಸಾರಮಾಡಲು ಜಗ್ಗಿಸಿದರು. ಜನಜಾಗ್ರತೆಯ ತೆರೆಗಳು ಯುರೋಪಖಂಡದಲ್ಲಿ ಏರಲಾರಂಭಿ ಸಿದಂತೆ ಅಲ್ಲಿ ಮೊದಲು ಇದ್ದ ಗ್ರೀಕ-ಲ್ಯಾಟಿನ್ ಭಾಷೆಗಳ ವರ್ಚಸ್ಸು ಕಡಿಮೆ ಯಾಗಿ ಫ್ರೆಂಚ್, ಇಟಾಲಿಯನ್, ಇಂಗ್ಲೀಷ, ಜರ್ಮನ್, ಸ್ಪ್ಯಾನಿಶ್ ಮುಂತಾದ ಜನಸಾಮಾನ್ಯರ ಭಾಷೆಗಳ ಪ್ರಾದುರ್ಭಾವವಾಯಿತು. ಅವೇ ಈಗ ಒಳ್ಳೇ ವೈಭವಶಿಖರದಲ್ಲಿ ಮೆರೆಯುತಿರುವವು. ತಾತ್ಪರ್ಯವೇನಂದರೆ, ನಿಜವಾಗಿ ಜನಜೀವನದ ವಿಕಾಸವಾಗಬೇಕಾದರೆ ಹಾಗು ಅದು ಆಗುತ್ತಹೋದಂತೆ ಜನಸಾಮಾನ್ಯರ ಭಾಷೆಯಲ್ಲಿಯೆ ಧಾರ್ಮಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ವ್ಯವಹಾರಗಳೆಲ್ಲ ನಡೆಯಲಿಕ್ಕೆಬೇಕು. ಯಾವು ದೋಂದು ಶ್ಲೋಕ ಇಲ್ಲವೆ ಮಂತ್ರ ಅದು ಸಂಸ್ಕೃತದಲ್ಲಿದ್ದಾಕ್ಷಣಕ್ಕೆ ಧಾರ್ಮಿಕ

ವಾಗುವದಿಲ್ಲ. ಯಾವುದರಿಂದ ಧರ್ಮಬೋಧವಾಗುವದೊ, ಧರ್ಮಜಾಗ್ರತಿ ಯುಂಟಾಗುವದೊ, ಧರ್ಮಸ್ಫೂರ್ತಿ ಸ್ಫುರಿಸುವದೊ ಅದೇ ಧಾರ್ಮಿಕ.

## ನಮ್ಮ ಕರ್ತವ್ಯ

ಪ್ರಾಂತಿಕ ಭಾಷೆಗಳು ಇಷ್ಟು ಮಹತ್ವದವು ಎಂದ ಬಳಿಕ ಅವುಗಳನ್ನು ಕುರಿತು ಆಯಾ ಪ್ರಾಂತದವರ ಕರ್ತವ್ಯಗಳೂ ವಿಶೇಷ ಹೊಣೆಗಾರಿಕೆಯು ಳ್ಳವವು. ನಮ್ಮ ಭಾಷೆ ಸರ್ವತೋಪರಿ ಪುಷ್ಟವೂ, ಪಾಷ್ಟವೂ ಸುಂದರವೂ ಆಗಿ ಸರ್ವೋತ್ತಮಸಾಧನವಾಗುವಂತೆ ನಾವು ಹೆಣಗಲಿಕ್ಕಬೇಕು. ಕನ್ನಡದ ಬಗ್ಗೆ ಕರ್ನಾಟಕಸ್ಥರು ಏನು ಮಾಡಬೇಕು ಇದನ್ನು ಸಂಕ್ಷೇಪದಿಂದ ಇಲ್ಲಿ ನೋಡಬಹುದು

ಮೊದಲನೆಯ ಮಾತೆಂದರೆ, ಕರ್ನಾಟಕದ ಸರ್ವಾಂಗೀನ ಉನ್ನತಿ-ಉದ್ಧಾರಗಳನ್ನು ಅನುಲಕ್ಷಿಸಿ ಕನ್ನಡ ಭಾಷೆಯ ಪ್ರಸಾರದ ಮಹತ್ವವನ್ನು ನಾವು ತಿಳಿದುಕೊಳ್ಳಲಿಕ್ಕೆಬೇಕು. ಕನ್ನಡ ನುಡಿಯ ಬಗ್ಗೆ ಅತ್ಯಂತ ಪ್ರೇಮಾದರಗಳನ್ನು ತಾಳಲಿಕ್ಕೆಬೇಕು. ನಿಜವಾದ ಪ್ರೇಮವಿರದಿದ್ದರೆ, ನಿಃಸ್ವಾರ್ಥ ಸೇವೆಯು ನಮ್ಮಿಂದಾಗದು. ನಮ್ಮ ಭಾಷೆಯ ಪ್ರೇಮವೆಂದರೆ ಅನ್ಯನೆರೆ ಹೊರೆಭಾಷೆಗಳ ದ್ವೇಷವಲ್ಲ. ಇಷ್ಟೇ ಅಲ್ಲ, ಸ್ವಭಾಷೆಯ ಪ್ರೇಮ ಅನ್ಯಭಾಷಾ ಪ್ರೇಮ ಇವು ಪರಸ್ಪರವಿರೋಧಿಯಲ್ಲ. ಆದರೆ ಅನ್ಯಭಾಷಾಪ್ರೇಮ ಇದರ ಅರ್ಥ ಸ್ವಭಾಷಾತ್ಯಾಗ ಇಲ್ಲವೆ ಸ್ವಭಾಷೆಯ ಕಡೆಗೆ ದುರ್ಲಕ್ಷ ಇಲ್ಲವೆ ಸ್ವಭಾಷೆಯ ವಿಷಯದಲ್ಲಿ ಇದ್ದ ನಮ್ಮ ಹಕ್ಕುಬಾಧ್ಯತೆಗಳ ಬಲಿದಾನ ಎಂದು ಯಾರೂ ತಿಳಿಯಕೂಡದು. ಮೇಲಾಗಿ ನಮ್ಮ ಪ್ರೇಮಾದರಗಳು ಸಾಧಾರವಿರಬೇಕು. ನಮ್ಮ ಸ್ವಾಭಿಮಾನವು ಆಳವಾದ ಜ್ಞಾನದಿಂದ ಪ್ರೇರಿತವಿರಬೇಕು. ತಾತ್ಕಾಲಿಕ ಭಾವನಾವಶತೆ ನಮಗೆ ಉಪಯುಕ್ತವಾಗಲಾರದು ಸಾಧಾರ ಮತ್ತು ಸಜ್ಞಾನವಿದ್ದ ಅಭಿಮಾನ-ಪ್ರೇಮಾದರಗಳೆ ನಮಗೆ ಅನಂತ ಕಷ್ಟನಷ್ಟಗಳನ್ನು ಸಹಿಸಿಯೂ ಮುಂದರಿಯುವ ಸಾಮರ್ಥ್ಯವನ್ನು ಕೊಡಬಲ್ಲವು. ಅರ್ಥಾತ್ ನಮ್ಮ ನುಡಿಯ ಇತಿಹಾಸ, ಸೌಂದರ್ಯ, ಸೌಷ್ಠವಗಳು, ಬಲಾಬಲಗಳು, ಗುಣ ದೋಷಗಳು, ಚನ್ನಾಗಿ ಮತ್ತು ಸಾಕಷ್ಟು ಗೊತ್ತಿರಬೇಕು. ಅಂದರೆಯೇ ನಮ್ಮಿಂದ ಆ ಭಾಷೆಯ ನಿಜವಾದ ಸೇವೆಯಾಗುವದು.

ನಮ್ಮ ನುಡಿಯ ಬಗ್ಗೆ ನಮ್ಮ ಭಾಷಾ ಬಾಂಧವರಲ್ಲಿ, ನೆರೆಹೊರೆಯವರಲ್ಲಿ, ಪರದೇಶದವರಲ್ಲಿ ಅಜ್ಞಾನದ ಮೂಲಕ ಏನಾದರೂ ತಪ್ಪು ತಿಳಿವಳಿಕೆಗಳಿದ್ದರೆ, ಉದಾಸೀನತೆ ತಿರಸ್ಕಾರಗಳು ಉಂಟಾಗಿದ್ದರೆ, ಅವುಗಳನ್ನು ನಿಜಜ್ಞಾನದ ನಿವೇದನದಿಂದ ನಿರ್ಮೂಲಗೊಳಿಸುವದು ಎರಡನೆಯ ಕರ್ತವ್ಯವು. ಯಾವ ಅಜ್ಞಾನವೂ ಎಲ್ಲಿಯೂ ಕ್ಷಮ್ಯವಿಲ್ಲ. ಆದರೆ ನಮ್ಮ ಪ್ರಾಂತದಲ್ಲಿಯೆ ಇರುವವರಲ್ಲಿ ನಮ್ಮ ಭಾಷೆಯ ಬಗ್ಗೆ ಅಜ್ಞಾನವಿದ್ದರೆ ಅದು ತೀರ ಅಕ್ಷಮ್ಯವು. ತಾಯಿ ನಾಡಿನ ಅಜ್ಞಾನವು ಅಕ್ಷಮ್ಯವಿದ್ದಷ್ಟೆ ಆಯಾ ಪ್ರಾಂತದ ತಾಯಿ ನುಡಿಯ ಅಜ್ಞಾನವೂ ಅಕ್ಷಮ್ಯವಿರುವದು. ಅಜ್ಞಾನ, ತನ್ಮೂಲಕ ಉಂಟಾವ ಅನಾಸ್ಥೆ ಅನಾದಾರಗಳೆ ದ್ರೋಹದ ಮೂಲ ಕಾರಣಗಳು. ಕನ್ನಡವೆ ಮಾತೃಭಾಷೆ ಇದ್ದವರಲ್ಲಿ ಅಜ್ಞಾನ ಅನಾಸ್ಥೆಗಳಿದ್ದರಂತೂ ಅದೊಂದು ದೊಡ್ಡ ಅಪರಾಧವೆನ್ನೈ. ಈ ಬಗೆಯ ಅನರ್ಥ ಪರಂಪರೆಗೆ ಕಾರಣವಾಗಬಹುದಾದ ಅಜ್ಞಾನವನ್ನು ಹೋಗಲಾಡಿಸುವದು ಪ್ರತಿಯೊಬ್ಬ ಪ್ರಾಂತಿಕನ ಕರ್ತವ್ಯವಿರುವದು.

ಮೂರನೆಯ ಮಾತೆಂದರೆ, ಇನ್ನೊಂಪಡೆಗೆ ಈ ಮೊದಲೆ ಕಾಣಿಸಿದ ಕ್ಷೇತ್ರಗಳಲ್ಲೆಲ್ಲ ತಪ್ಪದೆ ಕನ್ನಡದ ಉಪಯೋಗ ನಡೆಯುವಂತೆ ಪ್ರಯತ್ನಪಡುವದು. ಹಾಗೆ ಮಾಡದೆ ಹೋದರೆ, ಆಚಾರ ಹೇಳಲಿಕ್ಕೆ ಬದನೇಕಾಯಿ ತಿನ್ನಲಿಕ್ಕೆ, ಎಂಬ ನ್ಯಾಯದಂತೆ ಆಗುವದು. ಯಾವದೆ ತತ್ವದ ಜೀವಾಳವು ಅದರ ಉಚ್ಚಾರ ಪ್ರಚಾರ ಪ್ರತಿಪಾದನಾದಿಗಳಲ್ಲಿರದೆ ಅದರ ನಿಷ್ಠಾಪೂರ್ವಕ ಆಚಾರದಲ್ಲಿಯೆ ಇರುವದು.

ಇಷ್ಟೆಲ್ಲ ಮಾಡಿ ಜನಸಾಮಾನ್ಯರಲ್ಲಿ ಭಾಷೆಯ ಸಾರ್ವತ್ರಿಕ ಪ್ರಸಾರ ಮಾಡದೆ ಹೋದರೆ ಅಡಿಗೆಮಾಡಿ ಮನೆಮಕ್ಕಳಿಗೆ ನೀಡದೆ ಹೋದಂತೆ ಆಗುವದು. ಆದುದರಿಂದ ಸಾರ್ವತ್ರಿಕ ಧರ್ಮಾರ್ಥ ಮೂಲ ಶಿಕ್ಷಣ, ಅಕ್ಷರಪ್ರಸಾರ; ಸುಲಭ ರುಚಿಕಟ್ಟಾದ ಆರೋಗ್ಯಕರ ವಾಙ್ಮಯದ ನಿರ್ಮಾಣ ಇವೆಲ್ಲ ನಡೆಯಲಿಕ್ಕೆಬೇಕು. ಹಳ್ಳಿಪಳ್ಳಿಗಳಲ್ಲಿ ಸಹ ವಾಚನಾಲಯಗಳ ಹಾಗೂ ಚರಪುಸ್ತಕಾಲಯಗಳ ಸ್ಥಾಪನೆ ಅವಶ್ಯ. ಅದೇ ರೀತಿ ನಾಟಕ, ಪುರಾಣ, ಕೀರ್ತನೆ, ಭಜನೆ, ದೊಡ್ಡಾಟ, ಜನಪದ ಸಾಹಿತ್ಯ ಮುಂತಾದವುಗಳ ಕಡೆಗೆ ಸಾಕಷ್ಟು ಲಕ್ಷಗೊಟ್ಟು ಭಾಷೆಯ ಪ್ರಸಾರಕ್ಕಾಗಿ ಅವುಗಳ ಯೋಗ್ಯ ಉಪಯೋಗವನ್ನು ಮಾಡಿಕೊಳ್ಳಲಿಕ್ಕೆಬೇಕು. ಇದು ನಾಲ್ಕನೆಯ ಕರ್ತವ್ಯವು.

ಭಾಷೆ ಸಾಧ್ಯವಲ್ಲ, ಸಾಧನವು ಮಾತ್ರ. ಶಾಂತ, ಪುಷ್ಟ, ತುಷ್ಟ, ಸಮರ್ಥ ವೀರವತ್ತರ, ಶ್ರೇಷ್ಠ ಸಮಾಜ ನಿರ್ಮಾಣವೆ ಸಾಧ್ಯವು. ಬೇಗ ಸಾಧಿಸ ಬೇಕಾದರೆ ಸಾಧನವು ಉತ್ತಮವಿರಬೇಕು. ಸುಲಭಶಬ್ದಭಾಂಡಾರ, ಉತ್ತಮ ನಿಘಂಟು, ಮುಂತಾದವುಗಳ ನಿರ್ಮಿತಿ, ಸುಂದರ ಶೈಲಿಯ ಪ್ರಚಾರ, ಸುಬದ್ಧ ವ್ಯಾಕರಣಾದಿಗಳ ಲೇಖನ, ಲಿಪಿಬದ್ಧ ಭಾಷೆಯು ಏಕರೂಪತೆ ತರುವಿಕೆ, ಲಿಪಿ ಸಾಧಾರಣೆ, ಒಳ್ಳೆ ಅಚ್ಚುಕೂಟಗಳ ಸ್ಥಾಪನೆ ಇತ್ಯಾದಿ ಸಾಧನ ಗಳಿಂದ ಭಾಷಾ ಸಾಧನವನ್ನು ಉತ್ತಮಗೊಳಿಲಿಕ್ಕೆಬೇಕು. ಇದು ಐದ್ದನೆಯ ಕರ್ತವ್ಯವು.

ವಕ್ತೃತ್ವ, ಲೇಖನ, ಲಾವಣಿ, ಕಾವ್ಯಗಾಯನ ಮುಂತಾದವುಗಳಲ್ಲಿ ಕಾಲಕಾಲಕ್ಕೆ ಸ್ಪರ್ಧೆಗಳನ್ನೇರ್ಪಡಿಸಿ ಇಲ್ಲವೆ ಇತರ ರೀತಿಯಿಂದ ಜನಸಾಮಾನ್ಯ ರಲ್ಲಿ ಭಾಷೆಯ ಬಗ್ಗೆ ಉತ್ಸಾಹಯುಕ್ತ ಪ್ರಯತ್ನಮಾಡುವ ಪ್ರವೃತ್ತಿಯನ್ನು ಉಂಟುಮಾಡಬೇಕು. ಇವುಗಳಿಂದ ಭಾಷೆಯ ಸಾಮರ್ಥ್ಯ ಸೌಂದರ್ಯಗಳ ಪ್ರದರ್ಶನವೂ ಆಗುವದು ಇದು ಆರನೆಯ ಕೆಲಸ.

ಈ ಬಗೆಯಾಗಿ ತಮ್ಮ ಭಾಷೆಯ ಅತ್ಯುನ್ನತಿಯನ್ನು ಸಾಧಿಸಲು ಪ್ರಾಂತಿಕರು ಯತ್ನಿಸುತ್ತ ಹೋಗಬೇಕು ಆದರೆ ಭಾಷೆಯಿದು ನಮ್ಮ ಮನ ಸಿನ, ನಮ್ಮ ಜೀವನದ ಬಿಂಬವು. ನಮ್ಮ ಮನಸು ಹಾಗೂ ಜೀವನದ ಮಟ್ಟ ಎಷ್ಟೊ ಅಷ್ಟೇ ನಮ್ಮ ಭಾಷೆ ಏರಬಲ್ಲದು ಎಂಬ ಮಾತನ್ನು ಲಕ್ಷ್ಯದಲ್ಲಿಟ್ಟು ಕೊಂಡು ನಡೆಯಬೇಕು ಅವುಗಳ ಮಟ್ಟನ್ನೇರಿಸುವದು ಎಲ್ಲಕ್ಕೂ ಶ್ರೇಷ್ಠ ಕರ್ತವ್ಯವು.

## ದುರ್ಲಕ್ಷ್ಯದಿಂದ ಹಾನಿ

ಯಾವ ಪ್ರಾಂತವು ತನ್ನ ಭಾಷೆಯ ಯೋಗ್ಯ ಪುತ್ತು ಸತತ ಉಪ ಯೋಗ, ಸುಧಾರಣೆ, ಪ್ರಸಾರ ಇವುಗಳತ್ತ ದುರ್ಲಕ್ಷ್ಯ ಮಾಡುವದೊ ಅದು ಬಹಳ ದೊಡ್ಡ ಹಾನಿಗೆ ಈಡಾಗುವದು. ಈಗ ನೂರಾರು ವರುಷಗಳಿಂದ ನಾವು ಕೇವಲ ಪರಕೀಯವಾದ ಆಂಗ್ಲ ಭಾಷೆಗೆ ಉಚ್ಚಸ್ಥಾನವನ್ನು ಕೊಟ್ಟು ಪ್ರಾಂತಿಕ ಭಾಷೆಗಳನ್ನು ಹೀನಾಯಿಸುತ್ತ ಬಂದುದರಿಂದ ನಮಗೆ ಅಪಾರ

ಹಾನಿಯುಂಟಾಗಿದೆ. ಜಗತ್ತಿನ ಯಾವದೇ ರಾಷ್ಟ್ರದಲ್ಲಿ ಪರಭಾಷೆಯೆಂಬುದು ಬೋಧ ಭಾಷೆ ಇಲ್ಲ. ಹಿಂದುಸ್ತಾನವೆ ಒಂದು ಅಂಥ ದುರ್ದೈವಿ ದೇಶವು. ಬ್ರಿಟಿಶರ ಗುಲಾಮಗಿರಿಗೆ ಹಿಂದುಸ್ತಾನವು ಒಳಗಾದುದೆ ಈ ಸ್ಥಿತಿಗೆ ಕಾರಣ. ನಮ್ಮ ತರುಣರ ಹತ್ತೆಂಟು ವರುಷಗಳು ಕೇವಲ ಒಂದು ಪರಕೀಯ ಭಾಷೆ ಕಲಿಯುವುದರಲ್ಲಿಯೆ ಹಾಳಾಗಿ ಹೋಗುವವು. ವಿಚಾರಶಕ್ತಿ, ಕಲ್ಪನಾ ಸಾಮರ್ಥ್ಯ ಮುಂತಾದವುಗಳ ಬೆಳವಣಿಗೆಗೆ ಕೃತ್ರಿಮ ತಡೆಯುಂಟಾಗುವದು. ಭಾಷೆಯೆಂದರೆ ಕೇವಲ ಭಾಷೆಯಲ್ಲ. ಅದರೊಡನೆ, ಅದರ ಗುಂಟ, ಆ ಸಂಸ್ಕೃತಿ, ಆ ವಿಚಾರ ಪದ್ಧತಿ, ಆ ಮನೋರಚನೆ, ಆ ಪರಂಪರೆ ಇವೆಲ್ಲ ಅನಿವಾರ್ಯವಾಗಿ ಬಂದು ಸೇರುವವು. ಹೀಗಾಗಿ ನಮ್ಮ ತರುಣರು ವಿಚಾರ ದಾಸ್ಯಕ್ಕೂ ಒಳಗಾಗುವರು. ನಮ್ಮ ಪ್ರಾಂತಿಕ ಭಾಷೆಗಳು ಹಾಗೂ ಅವು ಗಳಲ್ಲಿ ಅಡಕವಾದ ಪೂರ್ವ ಪರಂಪರೆ ಸಂಸ್ಕೃತಿ ಮುಂತಾದವು ಮೂಲೆಗುಂಪು ಆಗುವವು. ಅವುಗಳ ಬಗ್ಗೆ ನಮ್ಮಲ್ಲಿ ಒಂದು ಬಗೆಯ ಹೀನ ಬುದ್ಧಿಯು ಉಂಟಾಗುವದು ಎಲ್ಲಕ್ಕೂ ಹೆಚ್ಚಿನ ಹಾನಿಯೆಂದರೆ ಇಂಗ್ಲೀಷ ಸುಶಿಕ್ಷಿತ ರೆನಿಸಿಕೊಳ್ಳುವವರು ಜನಸಾಮಾನ್ಯರೊಡನೆ ಬೆರೆಯದೆ ಆರಿಸಿಟ್ಟಂತೆ ಬೇರೆ ಯುಳಿದು ಒಂದು ಪ್ರತ್ಯೇಕ ಜಾತಿಯವರಾದಂತೆ ವರ್ತಿಸುವರು. ಇದಲ್ಲದೆ ತಮ್ಮ ವಿಚಾರಗಳನ್ನು ತಮ್ಮ ಭಾಷೆಯಲ್ಲಿ ಚನ್ನಾಗಿ ವ್ಯಕ್ತಮಾಡಲು ಅವರು ಅಸಮರ್ಥರಾದುದು ಕಂಡುಬರುವದು. ಅವರು ಒಂದು ಬಗೆಯಿಂದ ಬ್ರಿಟಿ ಶರ ಮಾನಸಪುತ್ರರಾಗಿ ಅವರ ರಾಜ್ಯಕಾರಭಾರದಲ್ಲಿ ಸಹಾಯಕರೂ ಅವರ ಸಾಮ್ರಾಜ್ಯದ ಆಧಾರಸ್ತಂಭರೂ ಅವರ ವ್ಯಾಪಾರದ ಏಜಂಟರೂ ಆದಂತೆ ಕಂಗೊಳಿಸುವರು. ಸುಮಾರು ೧೮೩೫ ರಲ್ಲಿ ಮೆಕಾಲೆ ಸಾಹೇಬರು ಹಿಂದು ಸ್ತಾನದ ಶಿಕ್ಷಣ ಧೋರಣೆಯನ್ನು ನಿಶ್ಚಯಿಸಿದಂದಿನಿಂದ ಪ್ರಾಂತಿಕ ಭಾಷೆ ಗಳತ್ತ ನಮ್ಮ ದುರ್ಲಕ್ಷವಾಗುತ್ತ ನಡೆದಿದೆ. ಇನ್ನು ಇಂಗ್ಲೀಷ ಶಿಕ್ಷಣದಲ್ಲಿ ಯಾದರೂ ಪ್ರಗತಿಯಾಗಿದೆಯೊ ಹೇಗೆ ಎಂಬುದನ್ನು ಪರೀಕ್ಷಿಸಿದರೆ ಈ ೧೧೦ ವರ್ಷಗಳಲ್ಲಿ ಇಂಗ್ಲೀಷ ಶಿಕ್ಷಿತರ ಪ್ರಮಾಣವು ನೂರಕ್ಕೆ ೧.೨೫ ಮಾತ್ರ ಏರಿದೆ. ಹೀಗಾಗಿ ನಮ್ಮ ಸ್ಥಿತಿ 'ಇತೋಭ್ರಷ್ಟಸ್ತತೋಭ್ರಷ್ಟಃ' ಎಂಬಂತೆ ಆಗಿದೆ

ಸರಕಾರವು ಬದಲಾಗುವವರೆಗೆ ನಮಗೇನು ಮಾಡಲಿಕ್ಕಾಗುವದು

ಎಂದು ಸುಮ್ಮನೆ ಕೂಡುವವೆಂದರೆ ಪ್ರತಿಕ್ಷಣವೂ ನಾವು ನಮ್ಮೀಉನ್ನತಿಯನ್ನು ಕುಗ್ಗಿಸಿದಂತೆ ಸೈ. ಈಗ ಜನರಲ್ಲಿ ಸಾಕಷ್ಟು ಜಾಗ್ರತಿಯಾಗುತ್ತ ನಡೆದಿದೆ. ಆದುದರಿಂದ ಲೋಕಸೇವಕರು, ಕಾರ್ಯಕರ್ತರು ಬಹುಮುಖವಾಗಿ ಪ್ರಾಂತ ಭಾಷೆಗಳ ಹಕ್ಕುಬಾಧ್ಯತೆಗಳನ್ನು ಪ್ರಸ್ಥಾಪಿಸಲೆತ್ನಿಸಲಿಕ್ಕೆಬೇಕು. ಈ ವಿಷಯದಲ್ಲಿ ಕರ್ನಾಟಕವು ಬಂಗಾಲ, ಮಹಾರಾಷ್ಟ್ರ, ಆಂಧ್ರ ಮುಂತಾದ ಪ್ರಾಂತಗಳಿಗಿಂತಇನ್ನೂ ಹಿಂದೆ ಇರುವದು. ಆದುದರಿಂದ ಕರ್ನಾಟಕಸ್ತರು ಹೆಚ್ಚು ಪ್ರಯತ್ನಶೀಲರಾಗುವದು ಅವಶ್ಯವು.

## ಭಾಷಾಜಾಗ್ರತಿ

ಜನಾಂಗಗಳ ಇತಿಹಾಸವನ್ನು ನಾವು ಪರಿಶೀಲಿಸಿದರೆ ಸಾಮಾನ್ಯತಃ ರಾಷ್ಟ್ರೀಯ ಜಾಗ್ರತಿಯೊಡನೆಯೆ ಭಾಷಾಜಾಗ್ರತಿಯಾಗುತಿರುವುದು ಕಂಡು ಬರುವದು. ರಾಷ್ಟ್ರೀಯ ಜಾಗ್ರತಿಯೆಂಬುದು ಯಾವಾಗಲೂ ಬಹುಮುಖವಿರುವದು. ಅದು ಕೇವಲ ರಾಜಕೀಯ, ಕೇವಲ ಸಾಮಾಜಿಕ, ಅಥವಾ ಕೇವಲ ಧಾರ್ಮಿಕ ಇಲ್ಲವೆ ಆರ್ಥಿಕವಿರುವದಿಲ್ಲ. ಆ ನವಚೈತನ್ಯದ ಉಗಮದೊಡನೆ ಹೊಸ ಹೊಸ ವಿಚಾರಗಳು, ನವಭಾವನೆಗಳು ಆಯಾ ದೇಶದ ಜನರ ಮನಸ್ಸಿನಲ್ಲಿ ಮೂಡುವವು. ಆಗಲೆ ಭಾಷಾ ಜಾಗ್ರತಿಯಾಗಿ ಭಾಷೆಯ ವಿಕಾಸ ಮಾಡಬೇಕೆಂಬ ಆವಶ್ಯಕತೆಯಪ್ರತೀತಿ ಅಲ್ಲಿಯ ಮುಖಂಡರಿಗೆ ಆಗುವದು. ವರುಷಾನುವರುಷ ದಾಸ್ಯದಲ್ಲಿ ಮುಳುಗಿದ್ದರೂ ಮುಂದೆ ಹೋರಾಡಿ ಸ್ವತಂತ್ರವಾದ ಇಟಲಿ, ಆಯರ್ಲಂಡ ಮುಂತಾದ ರಾಷ್ಟ್ರಗಳಲ್ಲಿ ಭಾಷಾಜಾಗ್ರತಿಯ ಪ್ರಚಂಡ ತೆರೆಗಳು ಆ ದೇಶಗಳನ್ನು ಅಲುಗಾಡಿಸಿ ಬಿಟ್ಟವು. ನಮ್ಮಲ್ಲಿ ಕೂಡ ಬಂಗಾಲ ಮಹಾರಾಷ್ಟ್ರ ಪ್ರಾಂತಗಳಲ್ಲಿ ಮೊದಲು ರಾಷ್ಟ್ರೀಯ ಜಾಗ್ರತಿಯ ಕಾಲಕ್ಕೆಯೆ ಭಾಷಾ ಜಾಗ್ರತಿ ಹೆಚ್ಚಾಯಿತು. ಆದೇ ಜಾಗ್ರತಿ ೧೯೦೫ರ ಸುಮಾರಕ್ಕೆ ಇಡೀ ಹಿಂದುಸ್ತಾನದ ಪ್ರಾಂತಪ್ರಾಂತಗಳಲ್ಲಿ ಹರಡಿತು. ಬಂಗಾಲದ ವಂಗಭಂಗ ಚಳವಳಿಯ ಚೈತನ್ಯವು ಇಡೀ ದೇಶವನ್ನು ಆವರಿಸಿತು.

ಭಾಷಾಜಾಗ್ರತಿಯ ಮುಖ್ಯ ಕಾರಣಗಳು ಎರಡು. ಅನ್ಯ ಭಾಷೆಗಳ ಆಕ್ರಮಣ ಅಥವಾ ಅವಾಸ್ತವ ವರ್ಚಸ್ಸು ಮತ್ತು ಸ್ತೋಮ ಒಂದು

ಸ್ವಭಾಷೆಯಲ್ಲಿಯೆ ತಮ್ಮ ವಿಚಾರ ಮತ್ತು ಭಾವನೆಗಳನ್ನು ಜನ ಸಾಮಾನ್ಯ ರಿಗೆ ಹೇಳಲಿಕ್ಕೆ ಬೇಕೆಂಬ ಸ್ಫೂರ್ತಿ ಇಪೊಂದು. ಪ್ರಾಂತೀಯ ಭಾಷೆಯ ಲ್ಲಿಯೆ ಎಲ್ಲ ವ್ಯವಹಾರಗಳು ಸ್ವಾಭಾವಿಕವಾಗಿಯೆ ನಡೆದಿದ್ದರೆ ಪ್ರಶ್ನೆಯೆ ಉಂಟಾಗುವದಿಲ್ಲ. ಆದರೆ ಯಾವದೆ ಐತಿಹಾಸಿಕ, ರಾಜಕೀಯ ಇಲ್ಲವೆ ಇತರ ಕಾರಣಗಳ ಮೂಲಕ ಬೇರೆ ಭಾಷೆಗಳ ವರ್ಚಸ್ಸು ನಡೆಯುತ್ತಿದ್ದರೆ ಪ್ರಾಂತೀಯ ಮುಖಂಡರು ಮತ್ತು ವಿಚಾರವಂತರು ಅವನ್ನು ತಡೆಗಟ್ಟ ಬೇಕಾಗುವದು ಹಾಗೂ ಭಾಷೆಯ ಬೆಳವಣಿಗೆಯಲ್ಲಿ ತೊಡಗಬೇಕಾಗುವದು. ಕರ್ನಾಟಕದ ವಿಷಯದಲ್ಲಿ ಹೀಗೆಯೆ ಆಯಿತು ಎಂದು ಹೇಳಬಹುದು.

ಒಂದು ಕಾಲಕ್ಕೆ ಕರ್ನಾಟಕದಲ್ಲಿ ಕನ್ನಡಕ್ಕಿಂತ ಸಂಸ್ಕೃತಕ್ಕೆ ಮನ್ನಣೆಹೆಚ್ಚು ಇತ್ತು. ಆದರೆ ಜನಜಾಗ್ರುತಿ ಹೆಚ್ಚು ಆಗುತ್ತ ಹೋದಂತೆ ಕನ್ನಡದ ಪ್ರಸಾ ರವು ಅನಿವಾರ್ಯವಾಯಿತು. ಕನ್ನಡ ಕವಿಗಳು ಕನ್ನಡದಲ್ಲಿ ಏನು ಕಡಿಮೆ ಇದೆ, 'ಸಂಸ್ಕೃತದಲ್ಲಿನ್ನೇನು' ಹೆಚ್ಚು ಇದೆ, ಎಂದು ಆವ್ಹಾನ ಕೊಟ್ಟುಕೊಟ್ಟು ಕನ್ನಡ ವನ್ನು ಕರ್ನಾಟಕಸ್ಥರ ಹೃದಯಪೀಠದಲ್ಲಿ ಸ್ಥಿರವಾಗಿ ಸ್ಥಾಪಿಸಿದರು. ಇಲ್ಲಿ ಮುಸಲ್ಮಾನರ ರಾಜ್ಯವಾದಾಗ ಫಾರಸಿ ಉರ್ದುಗಳು ಸ್ವಲ್ಪ ತಲೆಯೆತ್ತಿದವು. ಆದರೆ ಕನ್ನಡವನ್ನು ಕುಗ್ಗಿಸುವ ಸಾಮರ್ಥ್ಯವು ಅವುಗಳಲ್ಲಿರಲಿಲ್ಲ. ಹಲವೊಂದು ಶಬ್ದಗಳನ್ನು ಮಾತ್ರ ಅವು ಕನ್ನಡಕ್ಕೆ ಕೊಟ್ಟವು ಇತ್ತ ಮರಾಠಿ ಅತ್ತ ತೆಲುಗಿನ ವರ್ಚಸ್ಸು ಸ್ವಲ್ಪ ನಡೆಯಿತು. ಆದರೆ ಎಲ್ಲಕ್ಕು ಹೆಚ್ಚಾಗಿ ಘಾತಕವಾದ ವರ್ಚಸ್ಸು ಇಂಗ್ಲಿಷಿನದೆ. ಯಾಕಂದರೆ ಅದು ಕೇವಲ ರಾಜಭಾಷೆ ಆಗಿ ಸುಮ್ಮನಿರಲಿಲ್ಲ. ಸಾಂಸ್ಕೃತಿಕ ಭಾಷೆ ಎನಿಸಿ ಸಮಾಧಾನ ಪಡಲಿಲ್ಲ. ತರುಣ ಪೀಳಿಗೆಯ ಬೋಧಭಾಷೆಯಾಗಿಬಿಟ್ಟಿತು. ಶಿಕ್ಷಣಸಂಸ್ಕಾರ ಬೇಕಾ ದರೆ ಆ ಭಾಷೆಯಲ್ಲಿ ಪಡೆಯಬೇಕು, ಇಲ್ಲದಿದ್ದರೆ ಇಲ್ಲೇ ಇಲ್ಲ ಈ ಸ್ಥಿತಿ ಯುಂಟಾಯಿತು.

ಸ್ವದೇಶಿ ಚಳವಳಿಯ ಮೂಲಕ ಕರ್ನಾಟಕದಲ್ಲಿ ರಾಷ್ಟ್ರೀಯ ಜಾಗ್ರುತಿ ಯಾಗುತ್ತ ಹೋದಂತೆ ಕನ್ನಡದ ಉಪಯೋಗವನ್ನೆ ಹೆಚ್ಚುಮಾಡುವ ಹವಣು ಬೆಳೆಯಲಾರಂಭಿಸಿತು. ಕನ್ನಡ ಲೇಖನ, ಅಚ್ಚುಕೂಟ, ವೃತ್ತಪತ್ರ, ರಾಷ್ಟ್ರೀಯ ಶಾಲೆಗಳಲ್ಲಿ ಕನ್ನಡ ಮಾಧ್ಯಮದಿಂದ ಶಿಕ್ಷಣ ಇವು ಬೆಳೆಯ

ಲಾರಂಭಿಸಿದುವು. ಕನ್ನಡ ಲೇಖಕರ ಸಭೆಯೊಂದು ಧಾರವಾಡದಲ್ಲಿ ಕೂಡಿ ಚರ್ಚೆಗೆ ಪ್ರಾರಂಭವಾಯಿತು. ಆ ಮೊದಲು ವಿದ್ಯಾವರ್ಧಕ ಸಂಘವೆಂಬದು ಸ್ಥಾಪನವಾಗಿತ್ತು. ಮುಂದೆ ಕನ್ನಡ ಸಾಹಿತ್ಯಪರಿಷತ್ತು ನಿರ್ಮಾಣವಾಗಿ ಜಾಗ್ರತಿಯ ಕೆಲಸವು ಮುಂದೆಸಾಗಿತು.

## ಕಾಂಗ್ರೆಸ್ಸಿನ ಉತ್ತೇಜನ

ಭಾಷಾನುಗುಣ ಪ್ರಾಂತರಚನೆಯ ತತ್ವವನ್ನು ಕಾಂಗ್ರೆಸ್ಸು ತನ್ನ ಘಟನೆಯಲ್ಲಿ ಸೇರಿಸುವದಕ್ಕು ಮೊದಲು ಲೋಕಮಾನ್ಯರು ತಮ್ಮ ಡೆಮಾಕ್ರೆಟಿಕ್ ಸ್ವರಾಜ್ಯಪಕ್ಷದ ಘೋಷಣೆಯಲ್ಲಿ ಆದಕ್ಕೆ ಎಡೆಗೊಟ್ಟರು. ಆ ತತ್ವಕ್ಕನುಸರಿಸಿ ಹಿಂದುಸ್ತಾನದಲ್ಲಿ ಆಡಳಿತದ ಪ್ರಾಂತಗಳ ಪುನರ್ರಚನೆಯಾಗಬೇಕೆಂದು ಅವರು ಸಾರಿದರು. ಅವರು ಸ್ವತಃ ಅತ್ಯಂತ ಉಜ್ವಲ ಮರಾಠಿ ಭಕ್ತರೂ ಆ ಭಾಷೆಯ ನಿಸ್ಸೀಮ ಸೇವಕರೂ ಇದ್ದರು. ಗಾಂಧೀಜಿಯವರು ಕೂಡ ೧೯೧೯ರಲ್ಲಿ ತಾವು ಹೋಮ ರೂಲ ಲೀಗದ ಅಧ್ಯಕ್ಷರಾದೊಡನೆ ಈ ತತ್ವದ ಪ್ರಚಾರವನ್ನು ನಡೆಸಿದರು. ೧೯೨೦ರಲ್ಲಿಯ ಕಾಂಗ್ರೆಸ್ ಅಧಿವೇಶನದ ನಂತರ ಈ ತತ್ವವು ಕಾಂಗ್ರೆಸ್ಸಿನ ಘಟನೆ ಮತ್ತು ಕಾರಭಾರದ ಮಟ್ಟಿಗೆ ಅಮಲಿನಲ್ಲಿಯೆ ಬಂದುಬಿಟ್ಟಿತು. ಅದಕ್ಕೂ ಮೊದಲು ಬಿಹಾರಕ್ಕೆ ೧೯೦೮ರಲ್ಲಿ, ಆಂಧ್ರಕ್ಕೆ ಮತ್ತು ಸಿಂಧಕ್ಕೆ ೧೯೧೭ರಲ್ಲಿ, ಕಾಂಗ್ರೆಸ್ ಪ್ರಾಂತಗಳು ದೊರೆತಿದ್ದವು. ಕೃತ್ರಿಮ ರಾಜಕೀಯ ವಿಚ್ಛೇದನದ ಮೂಲಕ ಕರ್ನಾಟಕವು ೧೯ ಆಡಳಿತಗಳಲ್ಲಿ ಹರಿದು ಹಂಚಿಹೋಗಿದೆ. ತಾವು ಗೆಲ್ಲುತ್ತ ಹೋದಂತೆ ಬ್ರಿಟಿಶರು ಕರ್ನಾಟಕದ ಭಾಗಗಳನ್ನು ಕೈಗೆ ಬಂದಂತೆ ಅತ್ತಿತ್ತ ಚೆಲ್ಲುತ್ತ ಬಂದಿರುವರು. ಆದರೆ ೧೯೨೦ರಿಂದ ಎಲ್ಲ ಕರ್ನಾಟಕಸ್ಥರಲ್ಲಿ ತಾವು ಒಂದು ಎಂಬ ಏಕೀಭಾವನೆಯು ಬೆಳೆಯುತ್ತ ನಡೆದಿದೆ. ಸ್ವತಂತ್ರ ಭಾರತದ ಬೇಡಿಕೆಯೊಡನೆ ಏಕತಂತ್ರ ಕರ್ನಾಟಕದ ಬೇಡಿಕೆಯು ಪ್ರಬಲವಾಗುತ್ತ ಬಂದಿದೆ. ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಚಟುವಟಿಕೆಗಳೆಲ್ಲ ಈಗ ಅಖಿಲ ಕರ್ನಾಟಕದ ತಳಹದಿಯ ಮೇಲೆ ನಡೆಯುವವಲ್ಲದೆ ಅವೆಲ್ಲ ಕನ್ನಡದಲ್ಲಿ ನಡೆಯುವವು. ಕರ್ನಾಟಕದ ಭಿನ್ನವಾದ ರಾಜಕೀಯ ವಿಭಾಗಗಳೆಲ್ಲ ಅಸಾಮಾನ್ಯವಾದ ಬಳಿಕೆ ಬೆಳೆದಿದೆ ಕನ್ನಡ ಭಾಷೆಯ ಏಕೀಕರಣಕ್ಕೂ ಏಕ

ರೂಪತೆಗೂ ಪ್ರಸಾರಕ್ಕೂ ಬಹಳ ಉತ್ತೇಜನ ದೊರೆತಿವೆ ತಾತ್ಪರ್ಯವೇನಂದರೆ, ಜನಸಾಮಾನ್ಯರ ಹಿತವನ್ನೆ ಮುಖ್ಯ ಧ್ಯೇಯವನ್ನಾಗಿಟ್ಟುಕೊಂಡ ಕಾಂಗ್ರೆಸ್ಸು ಸ್ವಾಭಾವಿಕವಾಗಿಯೆ ಭಾಷಾನುಗುಣ ಪ್ರಾಂತರಚನೆಯ ಮೂಲಕ ಪ್ರಾಂತೀಯ ಭಾಷೆಗಳಿಗೆ ಪ್ರೋತ್ಸಾಹ ಕೊಡುವ ಕಾರ್ಯವನ್ನು ಒಳ್ಳೆ ಯಶಸ್ವಿತೆಯಿಂದ ಮಾಡುತ್ತ ಬಂದಿದೆ. ಎಲ್ಲ ಪ್ರಾಂತಗಳಲ್ಲಿಯ ಈಚೆಗಿನ ಭಾಷಾ ಜಾಗ್ರತಿ ಹಾಗೂ ಭಾಷಾಪ್ರಗತಿಯೆ ಈ ಮಾತಿಗೆ ಸಾಕ್ಷಿ. ಕಾಂಗ್ರೆಸ್ಸು ಅಧಿಕಾರಾರೂಢವಿದ್ದಾಗ ಅಕ್ಷರ ಪ್ರಸಾರ, ಹೆಚ್ಚು ಶಾಲೆಗಳ ಸ್ಥಾಪನೆ ಮುಂತಾದ ಕಾರ್ಯಕ್ರಮಗಳನ್ನು ದೊಡ್ಡ ಪ್ರಮಾಣದ ಮೇಲೆ ಕೈಕೊಂಡು ಅದೇ ಕಾರ್ಯವನ್ನು ಮುಂದೆ ಸಾಗಿಸಿತು. ಪೂರ್ಣ ಸ್ವರಾಜ್ಯವು ಪ್ರಾಪ್ತವಾದೊಡನೆ ಭಾಷೆಗನುಗುಣವಾದ ಆಡಳಿತದ ಪ್ರಾಂತಗಳು ನಿರ್ಮಾಣವಾಗಿ ಆಯಾ ಪ್ರಾಂತಗಳಲ್ಲಿ ಪ್ರಾಂತಿಕ ಭಾಷೆಗಳೆ ಪಟ್ಟದರಸಿಗಳಾಗಿ ಮೆರೆಯುವವೆಂಬಲ್ಲಿ ಸಂಶಯವಿಲ್ಲ.

## ವಿಧಾಯಕ ಕಾರ್ಯಗಳಲ್ಲಿ ಒಂದು

ಕಾಂಗ್ರೆಸ್ಸು ಪ್ರಧಾನವಾಗಿ ರಾಜಕೀಯ ಧ್ಯೇಯವನ್ನು ಸಾಧಿಸಲು ಹೊರಟ ಸಂಸ್ಥೆ. ಆದರೂ ಸರ್ವದೃಷ್ಟಿಯಿಂದ ರಾಷ್ಟ್ರದ ಪುನರುಜ್ಜೀವನ ಮಾಡುವದೆ ಆದರ ಹೇತುವೆಂಬುದು ಅದು ಕೈಕೊಂಡ ವ್ಯಾಪಕಕಾರ್ಯ ಪ್ರಣಾಲಿಯ ಮೇಲಿಂದ ಕಂಡುಬರುವದು. ಕಾಂಗ್ರೆಸ್ಸಿನ ಪಂಚದಶವಿಧ ಕಾರ್ಯಕ್ರಮವೆ ಇದಕ್ಕೆ ಸಾಕ್ಷಿ. ಪ್ರಾಂತಭಾಷೆಯ ಸೇವೆ, ರಾಷ್ಟ್ರಭಾಷೆಯ ಪ್ರಸಾರ ಇವೆರಡೂ ಅದರಲ್ಲಿವೆ. ಗಾಂಧೀಜಿಯವರು ೧೯೪೧ರಲ್ಲಿ ಪ್ರಕಟಿಸಿದ ತಮ್ಮ 'ವಿಧಾಯಕ ಕಾರ್ಯಕ್ರಮ' ಎಂಬ ಪುಸ್ತಿಕೆಯಲ್ಲಿ ಈ ಕೆಳಗಿನ ಮಾತುಗಳನ್ನು ಹೇಳಿರುವರು. 'ಸಾಮಾನ್ಯತಃ ನಾವು ಮಾತೃಭಾಷೆಗಿಂತ ಆಂಗ್ಲಭಾಷೆ'ಯನ್ನು ಹೆಚ್ಚು ಪ್ರೀತಿಸಿರುವೆವು. ಆದರಿಂದ ರಾಜಕೀಯ ವಿಚಾರವುಳ್ಳ ಸುಶಿಕ್ಷಿತರ ಹಾಗೂ ಜನಸಾಮಾನ್ಯರ ನಡುವೆ ಅತ್ಯಂತ ಭಿನ್ನಭಾವವುಂಟಾಗಿದೆ. ಸುಶಿಕ್ಷಿತರದೊಂದು ಪ್ರತ್ಯೇಕ ಜಾತಿಯೆ ಆದಂತಾಗಿದೆ. ಪ್ರಾಂತೀಯ ಭಾಷೆಗಳಿಗೆ ಬಹಳ ದೊಡ್ಡ ಪೆಟ್ಟುಬಿದ್ದು ಅವು ಸಾಕಷ್ಟು ಪ್ರಗತಿಹೊಂದದೆ ಕುಗ್ಗಿಸಿಂತಿವೆ. ಅನೇಕ ಸಾರೆ ಗಹನವಿಚಾರಗಳನ್ನು ನಮ್ಮ ಭಾಷೆಗಳಲ್ಲಿ ವ್ಯಕ್ತಮಾಡುವದೆ ಅಸಾಧ್ಯವಾಗುತ್ತದೆ ವೈಜ್ಞಾನಿಕ ಶಬ್ದಗಳಿಗೆ ನಮ್ಮಲ್ಲಿ ಸಾಕಷ್ಟು ಪಾರಿ

ಭಾಷಿಕ ಶಬ್ದಗಳು ಇನ್ನೂ ನಿರ್ಮಾಣವಾಗಿಲ್ಲ. ಈ ಪರಿಸ್ಥಿತಿಯ ಮೂಲಕ ಬಹಳ ಅನರ್ಥವುಂಟಾಗಿದೆ. ಆಧುನಿಕ ವಿಚಾರಗಳಿಗೆ ಜನಸಾಮಾನ್ಯರು ಎರವಾಗಿದ್ದಾರೆ. ಪ್ರಾಂತಿಕಭಾಷೆಗಳತ್ತ ನಾವು ಮಾಡಿದ ದುರ್ಲಕ್ಷದ ಮೂಲಕ ನಮಗೆ ಆದ ಹಾನಿ ಎಷ್ಟೆಂಬದನ್ನು ನಾವು ಸರಿಯಾಗಿ ಈಗಲೆ ಅಳೆದು ನೋಡಲಾರೆವು. ಅದು ಮುಂದೆ ಇನ್ನೂ ಹೆಚ್ಚೆಚ್ಚು ಪ್ರತೀತವಾಗುವದು. ಈ ಕೇಡನ್ನು ನಾವು ಬೇಗನೆ ತಡೆಯದೆ ಹೋದರೆ ಜನಸಾಮಾನ್ಯರು ಕೊನೆಯ ವರೆಗೆ ಅಜ್ಞಾನದಲ್ಲಿಯೆ ಕೊಳೆಯಬೇಕಾಗುವದು. ಈ ಸ್ಥಿತಿಯಲ್ಲಿ ಅವರು ಸ್ವರಾಜ್ಯರಚನೆಗೆ ಯಾವ ಸಹಾಯವನ್ನು ಮಾಡಲಾರರು. ಅಹಿಂಸೆಯ ತಳಹದಿಯ ಮೇಲೆ ಕಟ್ಟಿದ ಸ್ವರಾಜ್ಯವೆಂದರೆ ಪ್ರತಿಯೊಬ್ಬನು ಸ್ವಾತಂತ್ರ್ಯದ ಚಳವಳಿಯಲ್ಲಿ ಧುಮುಕಿ ಸ್ವತಃ ಭಾಗವಹಿಸಿ ಗೆದ್ದ ಸ್ವರಾಜ್ಯ, ವೆಂಬ ಮಾತು ಉಡಕವಾಗಿದೆ. ನಾವು ಕೈಕೊಳ್ಳುವ ಪ್ರತಿಯೊಂದು ಕ್ರಮ, ನಾವು ಇಡುವ ಒಂದೊಂದು ಹೆಜ್ಜೆ, ಅವುಗಳಿಂದ ಧ್ವನಿತವಾಗುವ ಎಲ್ಲ ಮಾತುಗಳು ಜನರಿಗೆ ಪೂರ್ಣವಾಗಿ ತಿಳಿಯದೆ ಹೋದರೆ ಅವರು ಚಳವಳಿಯಲ್ಲಿ ಪೂರ್ಣರೀತಿಯಿಂದ ಭಾಗವಹಿಸುವ ಬಗೆಯಾವದು? ಅವರ ಭಾಷೆಯಲ್ಲಿಯೆ ನಾವು ಎಲ್ಲವನ್ನೂ ತಿಳಿಸಿಕೊಡದಿದ್ದರೆ ಅವರು ಭಾಗವಹಿಸುವದು ಅಶಕ್ಯವು; ಇದೇ ಸಂದರ್ಭದಲ್ಲಿ ಬಾಬುರಾಜೇಂದ್ರಪ್ರಸಾದರು ತಮ್ಮ ಪುಸ್ತಿಕೆಯಲ್ಲಿ ಬರೆದುದೇನೆಂದರೆ, "ತನ್ನ ವಿಕಾಸ, ತನ್ನ ಸಂಸ್ಕೃತಿಯ ಸಂರಕ್ಷಣ, ತನ್ನ ಅತ್ಯಂತ ಆಂತರಿಕ ವಿಚಾರಗಳ ನಿವೇದನ ಈ ದೃಷ್ಟಿಯಿಂದ ಮಾತೃಭಾಷೆಯ ಕೃಷಿಯು ಅತ್ಯವಶ್ಯವು. ನಮ್ಮ ಪ್ರಾಂತೀಯ ಭಾಷೆಗಳೇ ಈ ಕಾರ್ಯವನ್ನು ಮಾಡಬಲ್ಲವು. ಕಾಲಚಕ್ರದ ಹಾವಳಿಯನ್ನೆದುರಿಸಿ ಆ ಭಾಷೆಗಳ ಜೀವನದ ಆಧ್ಯಾತ್ಮಿಕ, ನೈತಿಕ ಮೂಲ್ಯಗಳನ್ನು ಈವರೆಗೆ ಉತ್ತಮ ರೀತಿಯಿಂದ ಸಂರಕ್ಷಿಸಿ ಎತ್ತಿಹಿಡಿದಿವೆ. ನಾವು ಈ ಪಿತ್ರಾರ್ಜಿತವನ್ನು ಕಾಪಾಡುವದಲ್ಲದೆ ಅದನ್ನು ಇನ್ನೂ ಹೆಚ್ಚಿಸಲಿಕ್ಕೆಬೇಕು. ಪ್ರಾಂತೀಯ ಹಾಗೂ ರಾಷ್ಟ್ರೀಯ ಭಾಷೆಗಳಲ್ಲಿ ತಿಕ್ಕಾಟವುಂಟಾಗಲು ನನಗಂತೂ ಏನೂ ಕಾರಣ ಕಾಣುವದಿಲ್ಲ. ಹೆಗಲಿಗೆ ಹೆಗಲು ಹಚ್ಚಿ ಅವು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತ, ಪರಸ್ಪರರ ಸಂಪರ್ಕದಿಂದ ಎರಡೂ ಬೆಳೆಯುತ್ತ ಹೋಗಲಿಕ್ಕೆಬೇಕು. ಪ್ರತಿಯೊಬ್ಬನು ತನ್ನ ಭಾಷೆಯನ್ನು ಚನ್ನಾಗಿ ಅರಿಯುವದು ಅತ್ಯವಶ್ಯ."

ಈ ದೃಷ್ಟಿಯಿಂದ ನೋಡಿದರೆ ಪ್ರಾಂತೀಯ ಭಾಷೆಗಳ ಸೇವೆ ಮಾಡು ವುದು ಎಂದರೆ ಒಂದು ವಿಧಾಯಕ ಕಾರ್ಯಕ್ರಮದಲ್ಲಿ ನಿರತವಿದ್ದಂತೆಯೆ. ಈ ಸೇವೆ ಕಾಂಗ್ರೆಸ್ಸಿನ ಮನ್ನಣೆಗೆ ಪಾತ್ರವು, ಗಾಂಧೀಜಿಯವರಿಗೆ ಇಷ್ಟವು, ರಾಷ್ಟ್ರಕ್ಕೆ ಮತ್ತು ಪ್ರಾಂತಕ್ಕೆ ಅವಶ್ಯವು.

## ಪ್ರಾಂತ ಭಾಷೆ, ಇತರ ಭಾಷೆಗಳು.

ನಮ್ಮ ಹಿಂದುಸ್ತಾನ ರಾಷ್ಟ್ರವು ಅತ್ಯಂತ ವಿಶಾಲವಿರುವದರಿಂದ ಅದು ಹಲವು ಸಣ್ಣ ದೊಡ್ಡ ಪ್ರಾಂತಗಳಿಂದ ಕೂಡಿದ್ದಾಗಿದೆ. ಅತಿ ದೊಡ್ಡ ಪ್ರಮಾಣದಲ್ಲಿ ಬಹು ಸಂಖ್ಯರಿರುವವರ ಭಾಷೆಯೆ ಆಯಾ ಪ್ರಾಂತದ ಭಾಷೆ ಇರುವದೆಂಬುದು ನಿಜ ಆ ಭಾಷೆಯೆ ಅಲ್ಲಿ ಪ್ರಧಾನ ಭಾಷೆಯೆಂಬುದು ನಿರ್ವಿ ವಾದವು. ಆ ಭಾಷೆಯ ಮುಖಾಂತರವೆ ಅಲ್ಲಿಯ ಜನಸಾಮಾನ್ಯರ ಏಳಿಗೆ ಆಗಬಲ್ಲದು ಎಂಬುದು ಸ್ವಯಂ ಸಿದ್ಧವು. ಹೀಗಿದ್ದರೂ ಪ್ರಾಂತದಲ್ಲಿ ಪ್ರಾಂತ ಭಾಷೆಯೊಡನೆ ಅನ್ಯ ಭಾಷೆಗಳ ಸಂಬಂಧವು ಬಂದೇ ಬರುವದು. ಒಂದು ಪ್ರಾಂತವೆಂದರೆ ಜಗತ್ತಿಗೆ ಸಂಬಂಧವಿಲ್ಲದ ನಡುಗಡ್ಡೆಯಲ್ಲಿ ಅಥವಾ ಅನ್ಯಭಾಷೆಗಳ ಸಂಪರ್ಕವೆ ಇಲ್ಲದ ಪ್ರದೇಶ ವಿಶೇಷವಲ್ಲ. ಆದುದರಿಂದ ಸಂ ಬಂಧ ಬರುವ ಆಯಾ ಭಾಷೆಗಳ ಸ್ಥಾನಮಾನಗಳಾವು, ಕಾರ್ಯ ಹಾಗೂ ಮರ್ಯಾದೆಗಳಾವು ಇದನ್ನು ಸ್ಪಷ್ಟಗೊಳಿಸುವದು ಅತ್ಯವಶ್ಯವಿರುವದು.

ಪ್ರಾಂತೀಯ ಭಾಷೆ ಎಂದು ಯಾವುದಕ್ಕನ್ನಬೇಕು ಇದು ಮೇಲೆಯೆ ಹೇಳಲಾಗಿದೆ ಇಲ್ಲಿ ಕನ್ನಡವನ್ನು ಕುರಿತೇ ವಿಚಾರಿಸುವ. ಅದರೊಡ ನೆಯೆ ನಮ್ಮ ನಿಕಟ ಸಂಬಂಧವಿರುವದು.

ಕನ್ನಡ ಅಥವಾ ಕನ್ನಡದ ಉಪಭಾಷೆಗಳಾದ ತುಳು, ಬಡಗು, ಕೊಡಗು ಮುಂತಾದ ಭಾಷೆಗಳನ್ನಾಡುವ ಅತಿ ಸಂಖ್ಯ ಜನರು ಯಾವ ಭೂ ಭಾಗದಲ್ಲಿ ಮನೆ ಮಾಡಿಕೊಂಡಿರುವರೊ ಅದೇ ಕರ್ನಾಟಕ ಪ್ರಾಂತವು. ಇಲ್ಲಿ ಕನ್ನಡವೆ ಪ್ರಾಂತ ಭಾಷೆ. ತುಳು, ಕೊಡಗು, ಬಡಗು ಇವು ಉಪಭಾಷೆಗ ಳಿರುವುದರಿಂದ ಅದು ಕನ್ನಡ ವರ್ಗಕ್ಕೆಯೆ ಸೇರಿದವುಗಳು. ಹಿಂದೀ ರಾಷ್ಟ್ರದ ಗಡಿಯ ಹೊರಗಿನ ಭಾಷೆಗಳಷ್ಟೇ ನಮಗೆ ಪರಭಾಷೆಗಳು ಉದಾಹರಣೆಗಾಗಿ ಇಂಗ್ಲೀಷ, ಫ್ರೆಂಚ, ಜರ್ಮನ್, ರಶಿಯನ್ ಇವು ನಮಗೆ ಪರಭಾಷೆಗಳು.

ಹಿಂದುಸ್ಥಾನದ ಗಡಿಯೊಳಗಿನ ಯಾವ ಭಾಷೆಗಳೂ ನಮಗೆ ಪರಭಾಷೆಗಳಲ್ಲ. ಅವೆಲ್ಲ ಸಹೋದರ ಭಾಷೆಗಳು, ಭ್ರಾತೃಭಾಷೆಗಳು; ಅವುಗಳಿಗೆ ಪರಭಾಷೆ ಎನ್ನುವದು ಬಹಳ ದೊಡ್ಡ ತಪ್ಪು. ಯಾವದೇ ಹಿಂದೀಯನಿಗೆ 'ಪರಕೀಯ ಎನ್ನುವದು ಎಷ್ಟು ತಪ್ಪೊ ಅಷ್ಟೇ ಇದಾದರೂ ತಪ್ಪಾಗುವದು. ಕರ್ನಾಟಕದ' ಗಡಿಗುಂಟ ಇರುವ ತಮಿಳು, ತೆಲುಗು, ಮಲಿಯಾಳ ಮತ್ತು ಮರಾಠಿ ಭಾಷೆಗಳು ನೆರೆಭಾಷೆಗಳು. ಹಿಂದುಸ್ಥಾನಿಯು ರಾಷ್ಟ್ರಭಾಷೆಯು. ಸಂಸ್ಕೃತವು ಕನ್ನಡದ ಮಟ್ಟಿಗೆ ಪೋಷಕಭಾಷೆ, ನಮ್ಮ ಸಂಸ್ಕೃತಿಯ ಭಾಷೆ. ಈ ಎಲ್ಲ ಭಾಷೆಗಳ ಸಂಪರ್ಕವು ಕನ್ನಡಕ್ಕೆ ಒಂದಿಲ್ಲೊಂದು ಬಗೆಯಿಂದ ಆಗುತಿರುವದರಿಂದ ಇವುಗಳತ್ತ ನಾವು ಯಾವ ದೃಷ್ಟಿಯಿಂದ ನೋಡಬೇಕು, ಇವುಗಳ ಸಂಬಂಧವನ್ನು ಯಾವ ರೀತಿ ಇಟ್ಟುಕೊಳ್ಳಬೇಕು, ಇವುಗಳ ಹಕ್ಕುಬಾಧ್ಯತೆಗಳಾವು, ಈ ಮಾತುಗಳನ್ನು ನಿಶ್ಚಯಿಸುವದು ಅವಶ್ಯವು.

ಕನ್ನಡದ ಉಪಭಾಷೆಗಳಾದ ತುಳು, ಕೊಡಗು, ಬಡಗು ಇವು ಲಿಪಿಬದ್ಧವಿಲ್ಲ. ಇವು ಬಾಯಿಮಾತುಗಳು ಮಾತ್ರ. ಇವುಗಳನ್ನಾಡುವವರ ಸಂಖ್ಯೆಯೂ ಬಹಳ ದೊಡ್ಡದಿಲ್ಲ. ಈ ಭಾಷೆಯಾಡುವವರೆಲ್ಲರಿಗೂ ಕನ್ನಡವು ಜೋಡು ಭಾಷೆ ಇದ್ದಂತಿದೆ ಆದರೂ ಅವರು ಸಾಕಷ್ಟು ಪ್ರಮಾಣದಲ್ಲಿ ಅಂದರೆ ನೂರರಲ್ಲಿ ೨೦-೩೦ ಇರುವಲ್ಲಿ ಅವರಿಗೆ ಅವರ ಭಾಷೆಯಲ್ಲಿಯೆ ಪ್ರಾಥಮಿಕ ಶಿಕ್ಷಣವು ಅವಶ್ಯವೆಂದು ಕಂಡರೆ ಹಾಗೆ ಮಾಡಲು ಅಡ್ಡಿ ಇರಕೂಡದು. ಆದರೆ ಜೊತೆಗೆ ಪ್ರಾಂತಭಾಷೆಯ ಪರಿಚಯವು ಕಡ್ಡಾಯವಾಗಿ ಆಗುವಂತೆ ಮಾಡಲಿಕ್ಕೆಬೇಕು.

ಇನ್ನು ತಮಿಳು, ತೆಲಗು, ಮಲಿಯಾಳಿ ಮತ್ತು ಮರಾಠಿ ಇವು ಕನ್ನಡದ ನೆರೆಭಾಷೆಗಳು. ಇವುಗಳೊಡನೆ ನೆರೆಹೊರೆಯ ಬಾಂಧವ್ಯದ ಸಂಬಂಧವನ್ನು ನಾವು ಇಟ್ಟುಕೊಳ್ಳಬೇಕು. ಸದ್ಯದ ಪರಿಸ್ಥಿತಿಯಲ್ಲಿ ನಮಗೆ ಶೇಕ್ಸಪೀಯರ, ಮಿಲ್ಟನ್ ಇವರ ಜ್ಞಾನವು ಹೆಚ್ಚು ಇರುತ್ತದೆ ಹೊರತು ಪ್ರಸಿದ್ಧ ಕುರಳ್‌ಗ್ರಂಥದ ಇಲ್ಲವೆ ತ್ಯಾಗರಾಜನ ಕೀರ್ತನೆಗಳು ಅಥವಾ ತುಕಾರಾಮ ರಾಮದಾಸರ ಲೇಖಗಳ ಪರಿಚಯವು ನಮಗೆ ಇರುವದಿಲ್ಲ. ಈ ಬಗೆಯ ಅಜ್ಞಾನದ ಮೂಲಕವೆ ನಮ್ಮ ನೆರೆಹೊರೆಯವರ ಬಗ್ಗೆ ನಮ್ಮ ಮನಸ

ಸ್ಸಿನಲ್ಲಿ ವಿಕಲ್ಪಗಳುಂಟಾಗುವ ಸಂಭವವು ಇರುವದು. ಅವರೊಡನೆ ನೃಥಾ ತಿಕ್ಕಾಟಗಳೂ ಆಗಬಲ್ಲವು ಈ ಬಗೆಯ ಅಜ್ಞಾನವು ಅಕ್ಷಮ್ಯವಿರುವದು. ಇದು ನಮ್ಮ ಸದೋಷ ಶಿಕ್ಷಣದ ಘೋರಪರಿಣಾಮವು. ಇನ್ನು ಈ ನೆರೆ ಭಾಷೆಗಳು ಯಾರ ಮಾತೃಭಾಷೆಯೊ ಅವರು ಕರ್ನಾಟಕಪ್ರಾಂತದಲ್ಲಿ ಕಾಯಂ ವಸತಿಗಾಗಿ ಬಂದು ನಿಂತುಕೊಂಡರೆ ಅವರು ಕನ್ನಡಕ್ಕೆ ಪ್ರಾಂತಭಾಷೆ ಎಂದು ಮನ್ನಣೆಕೊಟ್ಟು ಅದಕ್ಕೆಯೆ ಪ್ರಾಧಾನ್ಯಕೊಡಬೇಕಾದೀತು. ಅವರೂ ಸಾಕಷ್ಟು ಸಂಖ್ಯೆಯಲ್ಲಿದ್ದಲ್ಲಿ ಪ್ರಾಥಮಿಕ ಶಿಕ್ಷಣವು ಮಾತೃಭಾಷೆಯಲ್ಲಿಯೆ ಆಗಬೇಕೆಂದೆನಿಸಿದರೆ ಆ ವ್ಯವಸ್ಥೆಮಾಡಬಹುದು ಆದರೆ ಅಲ್ಲಿಯೂ ಪ್ರಾಂತ ಭಾಷೆಯ ಪರಿಚಯವು ಅವಶ್ಯ ಮುಸಲ್ಮಾನಬಾಂಧವರಿಗೂ ಇದೇ ಮಾತು ಅನ್ವಯಿಸುವದು. ಮೇಲಿನ ವರ್ಗಗಳಲ್ಲಿ ಬೋಧಭಾಷೆ ಕನ್ನಡವೇ ಇರ ಬಲ್ಲದು ಬೇರೆ ಭಾಷೆಯವರ ಸಂಖ್ಯೆ ಸಾಕಷ್ಟಿದ್ದಲ್ಲಿ ದ್ವಿತೀಯ ಭಾಷೆ ಎಂದು ಅದಕ್ಕೆ ಸ್ಥಾನವು ದೊರೆಯಬಲ್ಲದು. ಉಚ್ಚಶಿಕ್ಷಣವು ಕನ್ನಡದಲ್ಲಿಯೆ ಕೊಡ ಲಾಗುವದು.

ಹಿಂದುಸ್ತಾನಿಯು ಅಂತರ್‌ಪ್ರಾಂತೀಯ ಅಥವಾ ರಾಷ್ಟ್ರಭಾಷೆ. ಕನ್ನ ಡದ ಪರಿಚಯವು ಸಾಕಷ್ಟು ಆದಬಳಿಕ ವ್ಯವಹಾರಕ್ಕೆ ಅವಶ್ಯವಿದ್ದಮಟ್ಟಿಗೆ ಹಿಂದುಸ್ತಾನಿಯ ಪರಿಚಯ ಮಾಡಿಕೊಡುವದು ಅವಶ್ಯ. ಮಾಧ್ಯಮಿಕ ಶಾಲೆಗಳಲ್ಲಿ ಅವಶ್ಯವೆನಿಸಿದವರು ಅದನ್ನು ದ್ವಿತೀಯ ಭಾಷೆಯೆಂದು ಕಲಿಯಲು ಆಸ್ಪದವಿರಬೇಕು. ಉಚ್ಚಶಿಕ್ಷಣ ಕ್ರಮದಲ್ಲಿ ಅದು ಅವಶ್ಯ ದ್ವಿತೀಯಭಾಷೆ ಯಾಗಬಲ್ಲದು ಆದರೆ ಕನ್ನಡವೆ ಬೋಧಭಾಷೆ ಇರಬೇಕೆನ್ನುವದನ್ನು ಯಾರೂ ಮರೆಯಕೂಡದು.

ಇನ್ನು ಸಂಸ್ಕೃತ ಇದು ನಮ್ಮ ಸಾಂಸ್ಕೃತಿಕ ಭಾಷೆಯೂ ಅಹುದು, ನಮ್ಮ ಪೋಷಕ ಭಾಷೆಯೂ ಅಹುದು ಆದುದರಿಂದ ಮಾಧ್ಯಮಿಕ ಶಾಲೆ ಗಳಲ್ಲಿ ಅದೊಂದು ದ್ವಿತೀಯ ಭಾಷೆಯೆಂದುಕೊಂಡು ಅಭ್ಯಸಿಸುವವರಿಗೆ ಅವಕಾಶವಿರಬೇಕು. ಉಚ್ಚಶಿಕ್ಷಣ ಪಡೆಯುವವರಾದರೂ ಅದರ ವಿಶೇಷ ಅಭ್ಯಾಸಮಾಡಲಿಚ್ಛಿಸಿದರೆ ಅವರಿಗೆ ಎಲ್ಲ ಅನುಕೂಲತೆಗಳನ್ನು ಒದಗಿಸಿ ಕೊಡಬೇಕು.

ಈ ಎಲ್ಲ ಮಾತುಗಳು ಹಿಂದುಸ್ತಾನದಲ್ಲಿಯ ಭಾಷೆಗಳ ಬಗ್ಗೆ ಆದವು. ಇನ್ನು ಪರಭಾಷೆಗಳ ವಿಷಯ. ಹಿಂದುಸ್ತಾನವು ಅನೇಕ ದೇಶಗಳೊಡನೆ ತನ್ನ ಸಂಬಂಧವನ್ನಿಟ್ಟುಕೊಳ್ಳಬೇಕಾಗುವದು. ಆ ಕೆಲಸಕ್ಕೆ ಇಂಗ್ಲೀಷಭಾಷೆ ಬಹಳ ಉಪಯುಕ್ತವು. ಚೀನ ಜಪಾನದವರು ಕೂಡ ಈಗ ಉಚ್ಚವರ್ಗಗಳಲ್ಲಿ ಇಂಗ್ಲೀಷ ಭಾಷೆಯನ್ನು ದ್ವಿತೀಯಭಾಷೆಯೆಂದು ಕಲಿಯುವರು. ನಾವಾದರೂ ಹಾಗೆಯೆ ಮಾಡಬೇಕಾಗುವದು ವ್ಯಾಪಾರಉದ್ಯೋಗಗಳಲ್ಲಿ ತೊಡಗಬೇಕೆನ್ನುವವರು, ವಿಜ್ಞಾನಾದಿಗಳನ್ನು ಕಲಿಯಬೇಕೆನ್ನುವವರು, ಪರದೇಶಗಳಿಗೆ ತೆರೆಳಬೇಕೆನ್ನುವವರು ಇಂಗ್ಲೀಷ ಇಲ್ಲವೆ ಫ್ರೆಂಚ ಮುಂತಾದ ಭಾಷೆಗಳನ್ನು ಕಲಿಯುವದು ಅವಶ್ಯವಾಗುವದು.

ಈ ರೀತಿ ಆಯಾ ಭಾಷೆಗಳ ವಿಷಯದಲ್ಲಿ ಕನ್ನಾಟಕದವರು ತಮ್ಮ ಧೋರಣೆಯನ್ನಿಡಬೇಕಾಗುವದು. ಈ ಎಲ್ಲ ಮಾತುಗಳು ಒಮ್ಮೆಲೆ ಆಗಬಹುದೆಂದು ಹೇಳುವದು ಅಸಾಧ್ಯ. ಆದರೆ ಈ ದಿಕ್ಕಿನಿಂದ ನಾವು ಸಾಗಬೇಕಾಗಿದೆ ಎಂಬದು ನಿಶ್ಚಿತ. ಮೇಲಾಗಿ ಮೇಲೆ ಹೇಳಿದ ಮಾತುಗಳು ಕೊನೆಯವೆಂದು ಯಾರೂ ತಿಳಿಯಕೂಡದು. ಅವು ದಿಗ್ದರ್ಶನರೂಪವಾಗಿವೆ. ಅನುಭವದಿಂದ, ವಿಚಾರವಿನಿಮಯದಿಂದ, ಚರ್ಚೆಯಿಂದ ಇವುಗಳಲ್ಲಿ ಹೆಲಕೆಲವು ಮಾರ್ಪಾಟುಗಳನ್ನು ಮಾಡಬೇಕಾಗಿ ಬರಬಹುದು ಆದರೆ ಆ ಎಲ್ಲ ಮಾರ್ಪಾಟಗಳು ವಿವರಗಳಿಗೆ ಸಂಬಂಧಿಸಿದವು ಸಿದ್ಧಾಂತದಲ್ಲ ಹೆಚ್ಚುಕಡಿಮೆ ಯಾವುದೂ ಇಲ್ಲ. ಸಿದ್ಧಾಂತಗಳನ್ನು ಸ್ಥಿರವಿಟ್ಟು ತಪಶೀಲುಗಳಲ್ಲಿ ಅಷ್ಟಿಷ್ಟು ಹೆಚ್ಚುಕಡಿಮೆ ಮಾಡಲೇಬೇಕಾಗುವದು. ಅದು ಯಾವದೇ ರೀತಿ ಬಾಧಕವಲ್ಲ.

ಇನ್ನು ಪ್ರಾಂತಕ್ಕೆ ಒಂದು ಭಾಷೆ ಇದ್ದಂತೆ ರಾಷ್ಟ್ರಕ್ಕೆ ಒಂದು ಭಾಷೆ ಅವಶ್ಯ. ಪ್ರಾಂತಪ್ರಾಂತಗಳಲ್ಲಿಯ ವ್ಯವಹಾರಕ್ಕೆ, ರಾಷ್ಟ್ರದ ಗೌರವಕ್ಕೆ, ನಮ್ಮ ರಾಷ್ಟ್ರದಲ್ಲಿಯದೆ ಆದ ಒಂದು ಭಾಷೆಯನ್ನು ನಾವು ರಾಷ್ಟ್ರಭಾಷೆಯನ್ನಾಗಿ ಮಾಡಿಕೊಳ್ಳಬೇಕು. ಆ ವಿಷಯದತ್ತ ಇನ್ನು ಹೊರಳುವ.

---

# ೨ ರಾಷ್ಟ್ರಭಾಷೆ

## ಅವಶ್ಯಕತೆ.

ಇಸವಿ ಸನ್ ೧೯೦೭-೧೯೦೮ ರ ಸುಮಾರಕ್ಕೆ ನಡೆದ ಒಂದು ಘಟನೆ, ರಾಷ್ಟ್ರೀಯ ನವಜಾಗ್ರತಿಯು ಹಿಂದುಸ್ಥಾನದಲ್ಲೆಲ್ಲ ಸಂಚರಿಸಿತ್ತು. ಹಿಂದೀ ತರುಣರು ಚೇತರಿಸಿ ರಾಷ್ಟ್ರಾಭಿಮಾನದಿಂದ ಪ್ರೇರಿತರಾಗಿ ದೇಶೋದ್ಧಾರಕ್ಕಾಗಿ ಏನು ಮಾಡಬೇಕು ಏನು ಬಿಡಬೇಕು ಎಂಬ ಆತುರದಿಂದ ನಿತ್ಯ ಚಿಂತನದಲ್ಲಿ ಮಗ್ನರಾಗಿದ್ದರು. ಬ್ರಿಟಿಶರ ಗುಲಾಮಗಿರಿಯಿಂದ ಮುಕ್ತರಾಗಬೇಕೆಂಬ ಒಂದೇ ಒಂದು ಹಂಬಲ ಅನೇಕರಲ್ಲಿ ಒಡಮೂಡಿತ್ತು. ಪರದೇಶಗಳಿಗೆ ಹೋದ ಹಿಂದೀ ವಿದ್ಯಾರ್ಥಿಗಳಲ್ಲಿಯೂ ಕರ್ತವ್ಯ ಜಾಗ್ರತಿಯಾಗಿತ್ತು. ಹೀಗೆ ವಾತಾವರಣವಿರುವಾಗ ಲಂಡನ್ ಪಟ್ಟಣದಲ್ಲಿ ಒಂದು ಅಟ್ಟದ ಮೇಲೆ ಹತ್ತೆಂಟು ಹಿಂದೀ ವಿದ್ಯಾರ್ಥಿಗಳು ಒಂದು ಆದಿತ್ಯವಾರ ದಿನ ಸಭೆಗೂಡಿದರು. ತಮ್ಮ ಆಶೆ ಆಕಾಂಕ್ಷೆಗಳೊಡನೆ ಸಹಾನುಭೂತಿಯುಳ್ಳ ಹಾಗೂ ಸಮದುಃಖಿಗಳಾದ ಒಬ್ಬಿಬ್ಬ ಆಯರಿಶ ವಿದ್ಯಾರ್ಥಿಗಳನ್ನೂ ಅವರು ಆಮಂತ್ರಿಸಿದ್ದರು. ಚಹಾಪಾನವಾದ ಬಳಿಕ ಮಾತಿಗೆ ಮಾತು ನಡೆದು ಹಿಂದುಸ್ಥಾನದ ಏಳಿಗೆಯ ಚರ್ಚೆ ಮೊದಲು ಮಾಡಿತು. ವಿದ್ಯಾರ್ಥಿಗಳಲ್ಲಿ ಬಂಗಾಲಿ, ಪಂಜಾಬಿ, ಮರಾಠಿ, ಗುಜರಾಥಿ, ಕರ್ನಾಟಕಿ ಮುಂತಾದವರಿದ್ದರು. ಅವರೆಲ್ಲರೂ ಇಂಗ್ಲಿಷದಲ್ಲಿಯೆ ಮಾತಾಡುತ್ತಿದ್ದರು. ಒಳ್ಳೆ ಆವೇಶದಿಂದ ಎಲ್ಲರೂ ಮಾತಾಡುತ್ತಿರುವಾಗ ಆ ಆಯರಿಶ ವಿದ್ಯಾರ್ಥಿಯು ಒಮ್ಮೆಲೆ ಅಂದದ್ದು, 'ರಾಷ್ಟ್ರ, ರಾಷ್ಟ್ರದ ಉದ್ಧಾರ ಎಂಬ ದೊಡ್ಡ ದೊಡ್ಡ ಮಾತಗಳನ್ನಾಡುತ್ತಿರುವಿರಿ. ನೀವು ರಾಷ್ಟ್ರಭಾಷೆಯಲ್ಲಿ ಏಕೆ ಮಾತಾಡುವದಿಲ್ಲ ?' ಅವರ ಚರ್ಚೆ ಕ್ಷಣಹೊತ್ತು ನಿಂತಿತು. ಎಲ್ಲರೂ ಬೆಪ್ಪಾಗಿ ಕುಳಿತರು. ಪ್ರಾಂತಿಕ ಭಾಷೆಗಳಲ್ಲ ಮಾತಾಡಬೇಕೆಂದರೆ ಅವು ಪರಸ್ಪರರಿಗೆ ತಿಳಿಯುವದಿಲ್ಲ. ತಮ್ಮನ್ನು ದಾಸ್ಯಕ್ಕೀಡು ಮಾಡಿದ ಬ್ರಿಟಿಶರ ಭಾಷೆಯನ್ನುಪಯೋಗಿಸುವದು ನಾಚಿಕೆಗೇಡು ಎನಿಸಲಾರಂಭಿಸಿತು. ಅಷ್ಟರಲ್ಲಿ ಮತ್ತೆ ಆ ಆಯರಿಶ ಸ್ನೇಹಿತನು 'ನಮ್ಮ ಮುಖಂಡರು ಮೊದಲ. ಆಯರ್ ಭಾಷೆಯ ಉದ್ಧಾರವನ್ನು ನಡೆಸಿದರು. ನಮ್ಮನಮ್ಮೊಳಗೆ ಮಾತಾಡುವಾಗ ದಾಸ್ಯದ ಕುರುಹಾದ ಈ ಆಂಗ್ಲ ಭಾಷೆ ಏಕೆ ಎಂದರು. ತಮ್ಮ

ವ್ಯವಹಾರವನ್ನೆಲ್ಲ ಆಯರ್ ಭಾಷೆಯಲ್ಲಿಯೆ ಮಾಡಬೇಕೆಂದು ಗೊತ್ತು ಮಾಡಿ ದರು. ' ಎಂದನು. 'ನಿಮಗೆ ತಿಳಿಯಲು ಇಂಗ್ಲೀಷದಲ್ಲಿ ಮಾತನಾಡು ತ್ತೇವೆ ' ಎಂದು ತಟ್ಟನೆ ಒಬ್ಬ ಹಿಂದೀ ವಿದ್ಯಾರ್ಥಿಯು ಅಂದನು ಆದರೆ ಅದು ಕೇವಲ ಮಾತಿಗೆ ಮರು ಮಾತು. ಎಲ್ಲರ ಕಣ್ಣಿನಲ್ಲಿಯೂ ಅಂಜನ ಹಾಕಿದಂತೆ ಆಯಿತು ತಮಗೊಂದು ರಾಷ್ಟ್ರಭಾಷೆ ಬೇಕು, ಹಿಂದುಸ್ತಾ ನಿಯು ಆ ಭಾಷೆ ಆಗಬಲ್ಲದು ಎಂಬುದು ಅವರಿಗೆ ಹೊಳೆಯಿತು.

## ಮುಖಂಡರ ಮತ.

ಭಾರತೀಯ ಮುಖಂಡತ್ವದ ಹೊಣೆಹೊತ್ತ ಬಳಿಕ ಲೋಕಮಾನ್ಯರು ರಾಷ್ಟ್ರಭಾಷೆಯ ಮಹತ್ವವನ್ನರಿತ ಆ ಭಾಷೆಯಲ್ಲಿ ಮಾತಾಡಲು ಪ್ರಾರಂಭ ಮಾಡಿದ್ದರು. ೧೯೧೬-೧೭ರಲ್ಲಿ ಲಖನೌ ಕಾನಪೂರ ಕಡೆಗೆ ಸಂಚಾರ ಬೆಳೆಸಿ ದಾಗ ಮೊದಲಿನಂತೆ ಇಗ್ಲೀಷ ಮಾತಾಡದೆ ಅವರು ಹಿಂದುಸ್ತಾನಿಯಲ್ಲಿಯೇ ಮಾತಾಡಿದರು. ಗಾಂಧಿಜೀಯವರಂತೂ ರಾಷ್ಟ್ರಭಾಷಾ ಪ್ರಚಾರವೆಂಬ ದೊಂದು ಕಾರ್ಯಕ್ರಮವನ್ನೆ ಮೊದಲಿನಿಂದ ಇಟ್ಟುಕೊಂಡಿರುವರು. ೧೯೨೫ ರಲ್ಲಿ ಕಾಂಗ್ರೆಸ್ಸು ಹಿಂದುಸ್ತಾನಿಯೆ ರಾಷ್ಟ್ರಭಾಷೆಯೆಂದೂ ಕಾಂಗ್ರೆಸ್ಸಿಗರು ಅದರ ಪ್ರಚಾರವನ್ನು ಮಾಡಬೇಕೆಂದೂ ಗೊತ್ತುವಳಿ ಮಾಡಿತು. ಗಾಂಧಿ ಪ್ರಣೀತ ಹಾಗೂ ಕಾಂಗ್ರೆಸ್ ಸ್ವೀಕೃತ ವಿಧಾಯಕ ಕಾರ್ಯಕ್ರಮಗಳಲ್ಲಿ ಪ್ರಾಂತ ಭಾಷಾಪ್ರೇಮ ಮತ್ತು ರಾಷ್ಟ್ರಭಾಷಾ ಪ್ರಚಾರ ಇವೆರಡೂ ಅವಳಿಜವಳಿ ಯಾಗಿರುವವು. ಗಾಂಧಿಜೀಯವರು ೧೯೪೦ ರಲ್ಲಿ ಬರೆದ 'ವಿಧಾಯಕ ಕಾರ್ಯ ಕ್ರಮ' ಎಂಬ ಪುಸ್ತಿಕೆಯಲ್ಲಿ ಈ ಬಗ್ಗೆ ಅಂದದ್ದೇನಂದರೆ, 'ಅಖಿಲ ಭಾರ ತೀಯ ಅಥವಾ ಅಂತರ್ ಪ್ರಾಂತೀಯ ಬಳಿಕೆಗಾಗಿ ಹಿಂದುಸ್ತಾನದಲ್ಲಿಯೆ ಹುಟ್ಟಿದ ಒಂದು ಭಾಷೆ ನಮಗೆ ಬೇಕು. ಅದು ಈಗಾಗಲೆ ಬಹುಸಂಖ್ಯೆಗೆ ತಿಳಿಯುತಿರಬೇಕು, ಇತರರು ಅನಾಯಾಸವಾಗಿ ಕಲಿಯಲು ಸಾಧ್ಯವಿರಬೇಕು. ನಿರ್ವಿವಾದವಾಗಿ ಹಿಂದುಸ್ತಾನಿಯು ಅಂಥ ಭಾಷೆಯು, ಉತ್ತರಹಿಂದುಸ್ತಾನದ ಹಿಂದುಮುಸಲ್ಮಾನಬಾಂಧವರ ಸಾಮಾನ್ಯಭಾಷೆಯದು. ಫಾರಸೀಲಿಪಿಯಲ್ಲಿ ಅದು ಬರೆಯಲ್ಪಟ್ಟಾಗ ಅದಕ್ಕೆ ಊರ್ದು ಎನ್ನುವರು. ೧೯೨೫ರಲ್ಲಿ ಕಾಂಗ್ರೆಸ್ಸಿ ನವರು ಸ್ವೀಕರಿಸಿದ ತಮ್ಮ ಪ್ರಸಿದ್ಧ ಗೊತ್ತುವಳಿಯಲ್ಲಿ ಅದಕ್ಕೆ ಹಿಂದುಸ್ತಾನಿ

ಎಂದಿರುವರು. ಅಂದಿನಿಂದ ತತ್ವತಃ ಹಿಂದುಸ್ತಾನಿಯೆ ನಮ್ಮ ರಾಷ್ಟ್ರಭಾಷೆ... ಇಂಗ್ಲೀಷದ ಮೋಹಿನಿಯಿಂದ ನಾವು ಇನ್ನೂ ಮುಕ್ತರಾಗಿಲ್ಲ. ಆಮೂಲಕ ಸ್ವರಾಜ್ಯದತ್ತ ನಾವು ಸಾಕಷ್ಟು ವೇಗದಿಂದ ಸಾಗಲೊಲ್ಲೆವು ಇಂಗ್ಲೀಷ ಕಲಿಯಲು ನಾವು ಕಳೆಯುವ ವರುಷಗಳಷ್ಟು ತಿಂಗಳಗಳನ್ನು ಹಿಂದುಸ್ತಾನಿ ಅಭ್ಯಸಿಸಲು ಕಳೆಯದೆ ಹೋದರೆ ಜನಸಾಮಾನ್ಯರಬಗ್ಗೆ ಇದ್ದ ನಮ್ಮ ಪ್ರೇಮವು ಅಷ್ಟಕ್ಕಷ್ಟೇ ಎಂದು ಹೇಳಬಹುದು ಇದೇ ಸಂದರ್ಭದಲ್ಲಿ ಬಾಬು ರಾಜೇಂದ್ರ ಪ್ರಸಾದರು ಅನ್ನುವದೇನಂದರೆ 'ನಮ್ಮ ರಾಷ್ಟ್ರದಂಥ ವಿಶಾಲ ರಾಷ್ಟ್ರಕ್ಕೆ ಪ್ರಾಂತಪ್ರಾಂತಗಳ ವ್ಯವಹಾರಕ್ಕಾಗಿ ಹಾಗೂ ರಾಷ್ಟ್ರೀಯ ಕಾರ್ಯಗಳಿಗಾಗಿ ಒಂದು ರಾಷ್ಟ್ರಭಾಷೆ ಬೇಕು ಅದು ಎಲ್ಲರೂ ಸಹಜವಾಗಿ ಕಲಿತು ತಿಳಿದು ಕೊಳ್ಳುವಂತಹದಿರಬೇಕು ಸದ್ಯದಲ್ಲಿ ಉತ್ತರ ಹಾಗೂ ಮಧ್ಯಹಿಂದುಸ್ತಾನದ ಬಹು ಸಂಖ್ಯ ಜನರು ಹಿಂದುಸ್ತಾನಿಯನ್ನು ಸಹಜವಾಗಿ ತಿಳಿದುಕೊಳ್ಳಬಲ್ಲರು. ಅವರಿಗೆ ಅದನ್ನು ಸರಿಯಾಗಿ ಮಾತಾಡಲು ಬರದಿದ್ದರೂ ಚಿಂತೆಯಿಲ್ಲ. ಹಿಂದುಸ್ತಾನಿಯ ಶಬ್ದ ಭಾಂಡಾರ ಹಾಗೂ ಹಿಂದುಸ್ತಾನದಲ್ಲಿಯ ಇತರ ಭಾಷೆಗಳ ಶಬ್ದ ಭಾಂಡಾರ ಇವು ಬಹುಮಟ್ಟಿಗೆ ಒಂದೇ ಇರುವವು. ಇದೊಂದು ನಮ್ಮ ಸುದೈವ. ಈಪರಿ ಹಿಂದುಸ್ತಾನಿಗೆ ಇಬ್ಬಗೆಯ ಅನುಕೂಲತೆ ಇರುವದು ಹಿಂದುಸ್ತಾನದ ಅರ್ಧದಷ್ಟು ಜನರಿಗೆ ಅದು ಚನ್ನಾಗಿ ತಿಳಿಯುವದು, ಮತ್ತು ಹೆಚ್ಚುಕಡಿಮೆ ಪ್ರಮಾಣದಲ್ಲಿ ಅದರ ಶಬ್ದಭಾಂಡಾರ ಹಾಗೂ ಇತರ ಭಾರತೀಯ ಭಾಷೆಗಳ ಶಬ್ದಭಾಂಡಾರ ಇವು ಸಾಮಾನ್ಯವಿರುವವು. ಈ ಹಿಂದುಸ್ತಾನಿಯೆಂಬುದೆ ನಮ್ಮ ರಾಷ್ಟ್ರಭಾಷೆ ಎಂದು ಮನ್ನಿಸಲಾಗಿದೆ.... ಆದುದರಿಂದ ಈ ಭಾಷೆಯನ್ನು ಕಲಿಯುವದು ಮತ್ತು ನಾಗರಿ ಊರ್ದುಲಿಪಿಗಳಲ್ಲಿ ಅದನ್ನು ಓದಲು ಬರೆಯಲು ಸಮರ್ಥವಾಗುವದು ನಮ್ಮೆಲ್ಲರ ಕರ್ತವ್ಯವಿರುವದು.'

೧೯೩೫ರಲ್ಲಿ ಪಾಸಾದ ಕಾಂಗ್ರೆಸ್ ಗೊತ್ತುವಳಿಯ ಮುಖ್ಯಾಂಶವು ಏನೆಂದರೆ, ಉತ್ತರಹಿಂದುಸ್ತಾನದ ಹಿಂದುಮುಸಲ್ಮಾನ ಜನಸಾಮಾನ್ಯರಿಗೆ ತಿಳಿಯುವ ಮತ್ತು ಅವರು ಉಪಯೋಗಿಸುವ, ಹಾಗೂ ನಾಗರಿ ಮತ್ತು ಊರ್ದು ಲಿಪಿಗಳಲ್ಲಿ ಬರೆಯಲಾಗುತಿರುವ ಹಿಂದುಸ್ತಾನಿಯು ರಾಷ್ಟ್ರಭಾಷೆಯೆಂದು ಮನ್ನಿಸಲಾಗಿದೆ. ಅಖಿಲಭಾರತೀಯ ಸ್ವರೂಪದ ಕಾಂಗ್ರೆಸ್ಸಿನ ಎಲ್ಲ ವ್ಯವಹಾರಗಳಲ್ಲಿ ಈ ಭಾಷೆಯನ್ನೆ ಉಪಯೋಗಿಸಬೇಕು ಮತ್ತು ಇದರ ಪ್ರಸಾರ

ಮಾಡಬೇಕು. ಕಾಂಗ್ರೆಸ್ಸಿನ ಘಟನೆಯಲ್ಲಿಯೆ, ಹಿಂದುಸ್ತಾನಿ ರಾಷ್ಟ್ರಭಾಷೆ ಇರಬೇಕು, ಪ್ರಾಂತಿಕ ಭಾಷೆಗಳು ಪ್ರಾಂತದಲ್ಲಿ ಪ್ರಧಾನವಿರಬೇಕು, ಎಂದು ಸ್ಪಷ್ಟ ಉಲ್ಲೇಖವಿರುವದು.

ಇದಲ್ಲದೆ ಕಾಲಕಾಲಕ್ಕೆ ಮಹಾತ್ಮಾಗಾಂಧಿಯವರು ಹಾಗೂ ಪಂಡಿತ ಜವಾಹರಲಾಲ, ಮೌಲಾನಾ ಅಬುಲ್ ಕಲಾಮ ಆಜಾದ ಮುಂತಾದ ಕಾಂಗ್ರೆಸ್ ಮುಖಂಡರು, ಝುಕೀರಹುಸೇನರಂಥ ಶಿಕ್ಷಣಜ್ಞರು, ತೇಜಬಹಾದ್ದೂರ ಸಪ್ರುರಂಥ ಮಂದಪಕ್ಷದವರು, ಭಗವಾನದಾಸರಂಥ ತತ್ವಜ್ಞಾನಿಗಳು, ಸರ್ ರಾಧಾಕೃಷ್ಣರಂಥ ವಿದ್ವಾಂಸರು ಹಿಂದುಸ್ತಾನಿಯ ಅವಶ್ಯಕತೆಯ ಬಗ್ಗೆ ಒತ್ತಿಒತ್ತಿ ಹೇಳುತ್ತಬಂದಿರುವರು.

## ರಾಷ್ಟ್ರಭಾಷೆಯ ಲಕ್ಷಣ

ಹಿಂದುಸ್ತಾನವು ಒಂದು ಚಿಕ್ಕದಾದ ರಾಷ್ಟ್ರವಾಗಿದ್ದರೆ ಅಥವಾ ಎರಡು ಮೂರೇ ಭಾಷೆಗಳು ದೇಶದಲ್ಲಿ ಪ್ರಚಲಿತವಿದ್ದರೆ ರಾಷ್ಟ್ರಭಾಷೆಯ ಪ್ರಶ್ನೆ ಉಂಟಾಗುತಿರಲಿಲ್ಲ. ಸ್ವಿತ್ಸರ್ಲಂಡದಲ್ಲಿ ಪ್ರಚಲಿತವಿದ್ದ ಜರ್ಮನ್, ಫ್ರೆಂಚ, ಇಟಾಲಿಯನ್ ಮೂರು ಭಾಷೆಗಳು ರಾಷ್ಟ್ರಭಾಷೆಗಳೆನಿಸುವವು. ಸರಕಾರೀ ಪತ್ರಕಗಳು ಮೂರೂ ಭಾಷೆಯಲ್ಲಿ ಹೊರಡುವವು ಆದರೆ ಹಿಂದುಸ್ತಾನದಲ್ಲಿ ಕನಿಷ್ಟ ಹದಿನಾಲ್ಕು ಒಳ್ಳೆ ಪುಷ್ಟಪುಷ್ಟ ಪ್ರಾಂತೀಯ ಭಾಷೆಗಳಿವೆ. ಅವೆಲ್ಲವುಗಳನ್ನು ರಾಷ್ಟ್ರಭಾಷೆಗಳೆಂದು ಮನ್ನಿಸಿದರೆ ಅನವಸ್ಥೆಯುಂಟಾಗುವದು. ಈ ಎಲ್ಲ ಪ್ರಾಂತಗಳೂ ಒಂದೇ ರಾಷ್ಟ್ರದ ಅಂಗಾಂಗಗಳು ನಾಳೆ ಈ ಎಲ್ಲ ಪ್ರಾಂತಗಳಿಂದ ಆರಿಸಿಬಂದ ಪ್ರತಿನಿಧಿಗಳು ಪ್ರಜಾಸಭೆಯಲ್ಲಿ ಯಾವ ಭಾಷೆಯನ್ನಾಡಬೇಕು, ಮಧ್ಯವರ್ತಿ ಸರಕಾರದ ಪ್ರಕಟನೆ ಪತ್ರಕಗಳು ಯಾವ ನುಡಿಯಲ್ಲಿರಬೇಕು, ಅಖಿಲ ಭಾರತೀಯ ಸ್ವರೂಪದ ಸಭೆಸಮ್ಮೇಲನಗಳ ಕಾರ್ಯಕಲಾಪಗಳು ಯಾವ ಭಾಷೆಯಲ್ಲಿ ನಡೆಯಬೇಕು ಪ್ರಾಂತಿಕ ಭಾಷೆಯ ಮುಖಾಂತರ ಶಿಕ್ಷಣಕೊಡುವ ವಿಶ್ವವಿದ್ಯಾಲಯಗಳಲ್ಲಿ ಬಾಂಧವ್ಯಬೆಳೆಸಬೇಕಾದರೆ ಯಾವ ನುಡಿಯ ಮೂಲಕ, ಈ ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟೇತೀರಬೇಕಾಗುವದು. ಒಂದು ಸಾಮಾನ್ಯ ಭಾಷೆ ಬೇಕು ಎಂಬುದೆ ಆ ಉತ್ತರ

ಈ ವಿಷಯದಲ್ಲಿ ನಾವು ಸ್ವಲ್ಪ ಇತಿಹಾಸದತ್ತ ನೋಡುವದು ಅವಶ್ಯ. ಹಿಂದುಸ್ತಾನವು ಒಂದೇ ರಾಷ್ಟ್ರವೆಂದು ಬೆಳೆಯುತ್ತ ಬಂದಿದೆ. ಆದುದರಿಂದ ಅಂತರ್ ಪ್ರಾಂತೀಯ ಬಳಿಕೆಗಾಗಿ ಒಂದಿಲ್ಲೊಂದು ಭಾಷೆ ಇಲ್ಲಿ ಪ್ರಚಾರ ದಲ್ಲಿದ್ದೇ ಇದೆ. ವಾಹನ ಸೌಕರ್ಯಾದಿಗಳಾಗಲಿ, ವ್ಯಾಪಾರಾದಿಗಳಾಗಲಿ, ಈ ಮೊದಲು ಹಿಂದುಸ್ತಾನದಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿರಲಿಲ್ಲ. ಅಖಿಲ ಭಾರತೀಯ ಸ್ವರೂಪದ ಚಟುವಟಿಕೆಗಳಲ್ಲಿ ಆಗ ಬಹುಜನರು ಭಾಗವಹಿಸು ತಿರಲಿಲ್ಲ ಆದರೂ ಧರ್ಮಚರ್ಚೆ, ವಾಙ್ಮಯ, ಸಂಸ್ಕೃತಿ ವಿಷಯಗಳು ಇವು ಗಳಲ್ಲಿ ಆಸೇತು ಹಿಮಾಚಲ ಪಂಡಿತರು ಭಾಗವಹಿಸುತಿದ್ದರು. ಅವರು ಸಂಸ್ಕೃತವನ್ನೆ ಸಾಮಾನ್ಯಭಾಷೆ ಮಾಡಿಕೊಂಡಿದ್ದರು. ಅಖಿಲ ಭಾರತೀಯ ಸ್ವರೂಪದ ಗ್ರಂಥರಚನೆ ಮಾಡಬೇಕಾದರೆ, ಚರ್ಚೆ-ಸಭೆ-ಸಮ್ಮೇಲನಗಳನ್ನು ನಡೆಸಬೇಕಾದರೆ ಸಂಸ್ಕೃತದಲ್ಲಿಯೆ ನಡೆಸುತಿದ್ದರು. ಈ ರೀತಿ ಪುರಾತನ ಕಾಲದಿಂದ ಹತ್ತೊಂಬತ್ತನೆ ಶತಮಾನದ ವರೆಗೆ ಸಂಸ್ಕೃತವು ನಮ್ಮ ಸಾಂಸ್ಕೃತಿಕ ಭಾಷೆಯಾಗಿತ್ತು. ನಡುವೆ ಚೀಣ, ಹೂಣ, ಶಕರು ಬಂದರು, ಹೋದರು. ಮುಸಲ್ಮಾನರೂ ೫-೬ ಶತಕಗಳ ವರೆಗೆ ಏಕಛತ್ರಾಧಿಪರಾಗಿ ಆಳಿದರು. ಆದರೂ ಸಂಸ್ಕೃತಕ್ಕೆ ಅಳಿಗಾಲವುಂಟಾಗಲಿಲ್ಲ. ಪ್ರಾಂತಭಾಷೆ ಗಳು ತಮ್ಮ ಪರಿಯಿಂದ ಪ್ರಗತಿಹೊಂದುತ್ತ ಬಂದರೂ ಹಿಂದುಸ್ತಾನದ ಸಂಸ್ಕೃತ ಜನರನ್ನು ಸಂಸ್ಕೃತ ಭಾಷೆಯೆ ಏಕಸೂತ್ರದಿಂದ ಸಂಬಂಧಿಸುತ್ತ ಬಂದಿತ್ತು. ಸಂಸ್ಕೃತದಲ್ಲಿರುವ ವೇದೋಪನಿಷತ್ತುಗಳು, ರಾಮಾಯಣ ಮಹಾಭಾರತಾದಿ ಪುರಾಣಗಳು, ಪಾರಾಶರ ಯಾಜ್ಞವಲ್ಕ್ಯಾದಿಸ್ಮೃತಿಗಳು, ಶೈವವೈಷ್ಣವಶಾಕ್ತ ಆಗಮಗಳು, ಕಾಲಿದಾಸ ಭವಭೂತಿ ಮಾಘಾದಿ ಕವಿ ಶ್ರೇಷ್ಠರ ಕೃತಿಗಳು, ವಾಗ್ಭಟ ಶುಶ್ರುತಾದಿಗಳು ಬರೆದ ಆಯುರ್ವೇದೀಯ ಗ್ರಂಥಗಳು, ಇವಲ್ಲದೆ ಅನೇಕ ಶಾಸ್ತ್ರೀಯ ವ್ಯವಹಾರಿಕ ಸಂಸ್ಕೃತ ಗ್ರಂಥಗಳು ಪ್ರಾಂತೀಯ ಲೇಖಕರಿಗೆ ಸ್ಫೂರ್ತಿಗೊಟ್ಟು ಪ್ರೇರಕವಾಗಿವೆ. ಪ್ರಾಂತಭಾಷೆ ಗಳು ಎಷ್ಟೇ ಬೆಳೆದರೂ [illegible] ತಳದಲ್ಲಿ ಗುಪ್ತಸರಸ್ವತಿ ನದಿಯಂತೆ ಸಂಸ್ಕೃತದ ಸುಳಿವು ಒಂದೇ ಸಮನೆ ಸಂಜೀವಿನಿಯಂತೆ ತನ್ನ ಕಾರ್ಯವನ್ನು ಮಾಡುತ್ತಲೆ ಬಂದಿದೆ. ಪರ್ಯಾಯದಿಂದ ಈ ಮಾತು ಏಕಭಾಷೆಯ ಅವಶ್ಯ ಕತೆಯನ್ನೆ ಸಿದ್ಧಮಾಡುವದು.

ಮುಸಲ್ಮಾನ ಅರಸರು ಮತ್ತು ಬಾದಶಹರು ಹಿಂದುಸ್ಥಾನದಲ್ಲಿ ಆಳಲು ಆರಂಭಿಸಿದಂದಿನಿಂದ ಇಲ್ಲಿ ದರಬಾರಗಳಲ್ಲಿ, ಕಚೇರಿಗಳಲ್ಲಿ, ರಾಜಕೀಯ ಪತ್ರ ವ್ಯವಹಾರಗಳಲ್ಲಿ ಫಾರಸಿಯು ಪ್ರವೇಶವಾಯಿತು. ಆ ಮೂಲಕ ಪಟ್ಟಣ ಗಳಲ್ಲಿ ಅಥವಾ ರಾಜಧಾನಿಗಳಲ್ಲಿ ಅದರ ಪ್ರಚಾರವು ಆಯಿತು. ಆದರೂ ಸಂಸ್ಕೃತಕ್ಕೆ ಅಥವಾ ಪ್ರಾಂತೀಯ ಭಾಷೆಗಳಿಗೆ ಅದರಿಂದ ವಿಶೇಷ ಪೆಟ್ಟು ತಗಲಲಿಲ್ಲ. ಯಾಕಂದರೆ ಶಿಕ್ಷಣ ಸಂಸ್ಥೆಗಳಲ್ಲಿ ಅದು ಪ್ರವೇಶಮಾಡಿ ಆಕ್ರ ಮಣದ ಧೋರಣವನ್ನು ಸ್ವೀಕರಿಸಲಿಲ್ಲ.

ಆಂಗ್ಲರು ಇಲ್ಲಿ ಕಾಲಿಟ್ಟಂದಿನಿಂದ ಮಾತ್ರ, ವಿಶೇಷತಃ ಇಂಗ್ಲೀಷ ಶಿಕ್ಷಣದ ಆಕ್ರಮಣವು ಆದಂದಿನಿಂದ ಸಂಸ್ಕೃತ, ಫಾರಸಿ ಹಾಗೂ ಪ್ರಾಂತೀಯ ಭಾಷೆಗಳು ಇವೆಲ್ಲಕ್ಕೂ ಅರ್ಧಚಂದ್ರ ದೊರಕಿತು. ಈ ಪರಿ ಇಲ್ಲಿಯ ಭಾಷೆಗಳಿಗೆ ಪೆಟ್ಟು ಬಿದ್ದಿದ್ದರೂ ಕೆಲಮಟ್ಟಿಗೆ ಸದ್ಯಕ್ಕೆ ಇಂಗ್ಲೀಷು ರಾಷ್ಟ್ರಭಾಷೆಯ ಕೆಲಸವನ್ನು ಮಾಡುತಿದೆ. ಆದರೆ ಅದಕ್ಕೆ ಭವಿಷ್ಯದಲ್ಲಿ ಎಡೆಯಿಲ್ಲ. ಈಗ ನೂರೈವತ್ತು ವರುಷಗಳಲ್ಲಿ ಅದು ಮಾಡಿದ ಪ್ರಗತಿಯನ್ನು ನೋಡಿದರೆ ತೀರ ನಿರಾಶೆಯಾಗುವದು. ಮೇಲಾಗಿ ಅದು ಜನಸಾಮಾನ್ಯರ ಭಾಷೆಯಾಗಿ ಮೆರೆಯಲಾರದು. ತಾನು ಪ್ರಸಾರಹೊಂದುವಾಗ ಅದು ಸಂಸ್ಕೃತ ಫಾರಸಿಗಳಿಗೆ, ಪ್ರಾಂತೀಯ ಭಾಷೆಗಳಿಗೆ ಕೊಟ್ಟ ಪ್ರಚಂಡ ಧಕ್ಕೆ ಯನ್ನು ಲಕ್ಷಕ್ಕೆ ತಂದರೆ, ನಮ್ಮ ಜನರ ಮೇಲೆ ಹೇರಿದ ವಿಚಾರದಾಸ್ಯವನ್ನು ಅನುಲಕ್ಷಿಸಿದರೆ ಅದು ನಮ್ಮ ರಾಷ್ಟ್ರಭಾಷೆಯಾಗುವದು ಶಕ್ಯವಿಲ್ಲ, ಇಷ್ಟ ವಿಲ್ಲ. ಆದುದರಿಂದ ನಮಗೆ ಬೇಕಾದ ರಾಷ್ಟ್ರಭಾಷೆ ಮೊದಲು ಒಮ್ಮೆ ಇದ್ದ ಸಂಸ್ಕೃತವೂ ಅಲ್ಲ, ಯಾಕಂದರೆ ಅದು ಈ ಹೊತ್ತು ಜೀವಂತ ಭಾಷೆ ಯಲ್ಲ, ಅದು ಗಡಚಾಗಿದೆ; ಫಾರಸಿಯೂ ಅಲ್ಲ, ಯಾಕಂದರೆ ಅದು ಎಂದೂ ಇಲ್ಲ ಬದ್ಧಮೂಲವಾಗಿಲ್ಲ, ಆಗುವದು ಸಾಧ್ಯವೂ ಇಲ್ಲ; ನಮ್ಮಲ್ಲಿಯ ಭಾಷೆ ಗಳೊಡನೆ ಅದರ ಯಾವ ಬಗೆಯ ಬಾಂಧವ್ಯವೂ ಇಲ್ಲ. ಇಂಗ್ಲೀಷಂತೂ ಸರ್ವಥಾ ಸಲ್ಲದು. ಅದು ನಮಗೆ ಈ ವರೆಗೆ ಸ್ವಲ್ಪ ಉಪಕಾರಮಾಡಿದ್ದರೂ ಅದರ ನೂರುಪಟ್ಟು ಅಪಕಾರಮಾಡಿದೆ. ಅದು ಪರಕೀಯ, ನಮ್ಮ ರಾಷ್ಟ್ರದ ಹೊರಗಿನದು ಎಂದು ಬೇಡ, ಅದಕ್ಕೂ ನಮ್ಮ ಭಾಷೆಗಳಿಗೂ ಏನೂ ಸಾಮ್ಯ ಸಾದೃಶ್ಯಗಳಿಲ್ಲವೆಂದು ಬೇಡ, ಅದನ್ನು ಕಲಿಯಲು ಶಕ್ತಿಧನವೇಳೆ ಅತಿ ಬೇಕಾಗುವದೆಂದು ಬೇಡ, ಅದರಲ್ಲಿ ನಮ್ಮ ಸಂಸ್ಕೃತಿ ಪರಂಪರೆಗಳ ಗಂಧವು

ಕೂಡ ಇಲ್ಲವೆಂದು ಬೇಡ, ಅದು ನಮಗೆ ಸಲ್ಲದ ತನ್ನವೇ ಆದ ಒಂದು ವಿಚಾರಪ್ರಣಾಲಿಯ ವಾಹನವಾಗಿರುವುದರಿಂದ ನಮಗೆ ಬೇಡ, ಅದು ನಮ್ಮ ದಾಸ್ಯದ ಕುರುಹು ಇರುವುದರಿಂದ ಬೇಡ. ರಾಷ್ಟ್ರೀಯವೆನಿಸಬೇಕಾದ ನಮ್ಮ ರಾಷ್ಟ್ರಭಾಷೆ ನಮ್ಮ ರಾಷ್ಟ್ರದಲ್ಲಿಯದೆ ಇರಬೇಕು, ನಮ್ಮ ಸಂಸ್ಕೃತಿ ಪರಂಪರೆಯಲ್ಲಿಯ ವಿಚಾರವೈಭವವನ್ನು ವ್ಯಕ್ತಗೊಳಿಸಲು ಸಮರ್ಥವಿರಬೇಕು, ಅದು ಈಗಾಗಲೆ ಬಹುಜನರಲ್ಲಿ ಪ್ರಚಲಿತವಿರಬೇಕು, ಇತರರಲ್ಲಿ ಪ್ರಚಲಿತ ವಿಲ್ಲದಿದ್ದರೂ ಪರಿಚಿತವಿರಬೇಕು, ನಮಗೆ ಸವಿಹಾಬದ್ದೆನಿಸಬೇಕು, ಎಲ್ಲರೂ ಕಲಿಯಲು ಸುಲಭವಿರಬೇಕು, ರಾಷ್ಟ್ರದ ಮಧ್ಯಪ್ರದೇಶದ್ದಿದ್ದರೆ ಮತ್ತಷ್ಟು ಅನುಕೂಲ.

ಈ ಎಲ್ಲ ಗುಣಗಳು ಅಥವಾ ಲಕ್ಷಣಗಳು ಒಂದು ಹಿಂದುಸ್ತಾನಿಯಲ್ಲಿಯೆ ಇರುವವು. ಅದು ನಮ್ಮ ರಾಷ್ಟ್ರದಲ್ಲಿಯ ಮಧ್ಯದೇಶದಲ್ಲಿ ಪ್ರಾಕೃತದಿಂದ ಹುಟ್ಟಿ ಬೆಳೆದುಬಂದ ಭಾಷೆ. ಸಂಸ್ಕೃತ, ಫಾರಸಿ, ಅರಬಿಗಳಿಂದ ಅದು ಪುಷ್ಟವು ಹಿಂದು ಮುಸಲ್ಮಾನ ಲೇಖಕರಿಬ್ಬರೂ ಅದನ್ನು ನೀರೆರೆದು ಮರ ವನ್ನಾಗಿ ಮಾಡಿದ್ದಾರೆ ಈ ಹೊತ್ತು ಅದು ಸುಮಾರು ೧೨ಕೋಟಿ ಜನರ ಮಾತೃಭಾಷೆಯಾಗಿದೆ ಇನ್ನು ೧೨ಕೋಟಿ ಜನರು ತತ್ಸದೃಶಭಾಷೆಯನ್ನಾಡು ತಿರುವುದರಿಂದ ಅದು ಅವರಿಗೂ ತಿಳಿಯಲು ಕಠಿಣವಾಗದು. ಇನ್ನು ಮೂರು ನಾಲ್ಕು ಕೋಟಿ ಜನರಿಗೆ ಅದು ನಿಕಟವಿರುವದರಿಂದ ಅವರಿಗೆ ಪರಿಚಿ ತವು. ದಕ್ಷಿಣ ಹಿಂದುಸ್ತಾನದಲ್ಲಿ ಕೂಡ ಪಟ್ಟಣಗಳಲ್ಲಿಯ ಹಲವು ಮುಸಲ್ಮಾನಬಾಂಧವರು, ಆ ಭಾಷೆಯನ್ನಾಡುತಿರುವುದರಿಂದ ಅದರ ಸುಳಿವು ಅಲ್ಲಿಯೂ ಇದೆ. ಗುಜರಾಥಿ, ಮರಾಠಿ ಜನರಿಗೆ ಅದು ಕಲಿಯಲು ಸುಲಭ. ದ್ರಾವಿಡದೇಶಗಳಲ್ಲಿಯೆ ಅದು ಸ್ವಲ್ಪ ಗಡಚೆನಿಸುವದು. ಒಂದೊಪ್ಪತ್ತು ಈ ಭಾಷೆಯನ್ನು ಬಿಟ್ಟು ಇನ್ನೊಂದನ್ನು ರಾಷ್ಟ್ರಭಾಷೆ ಮಾಡಬೇಕೆಂದು ಯೋಚಿಸಿದರೆ ಅದು ಸಾಧ್ಯವಾಗದ ಮಾತು. ಆರು ಕೋಟಿ ಜನರಿಗೆ ಮಾತ್ರ ಬಂಗಾಲಿ ಬರುವದು. ಬಂಗಾಲಿ ಭಾಷೆ ಆಸಾಮಿಗಳಿಗೆ ಸ್ವಲ್ಪ ಪರಿಚಿತ, ಇನ್ನುಳಿದವರಿಗೆ ತೀರ ಅಪರಿಚಿತ. ಮರಾಠಿ, ತೆಲುಗು ಮುಂತಾದ ಭಾಷೆಯನ್ನಾಡುವವರಾರೂ ಮೂರು ಕೋಟಿಗಿಂತ ಮಿಕ್ಕಿಲ್ಲ. ಹೀಗಿರುವಾಗ ಹಿಂದುಸ್ತಾನಿಯೆ ನಮ್ಮ ರಾಷ್ಟ್ರಭಾಷೆ ಆಗಬಲ್ಲದು. ಇದಲ್ಲದೆ ಈಗಾಗಲೆ

ಮೂವತ್ತು ವರುಷ ಆ ಪ್ರಚಾರ ಸತತ ನಡೆದಿದೆ. ದಕ್ಷಿಣಹಿಂದುಸ್ತಾನದಲ್ಲಿ **ಕೂಡ** ಪ್ರಚಾರಕಾರ್ಯ ನಡೆದು ಸುಮಾರು ಇಪ್ಪತ್ತೇಳು ವರುಷಗಳಾಗಿ ಹೋದವು. ಮಂದಗತಿಯಿಂದಾದರೂ ಅದರ ಪ್ರಗತಿಯು ನಡೆದಿದೆ. ಅಂದ ಬಳಿಕ ಈಗ ಬೇರೆ ಪ್ರಯತ್ನಮಾಡಲು ಯಾವ ಕಾರಣವೂ ಇಲ್ಲ, ಯಾವ ಅನುವೂ ಇಲ್ಲ.

## ಹಿಂದುಸ್ತಾನ ಒಂದೇ ರಾಷ್ಟ್ರ

ಹಿಂದುಸ್ತಾನವು ಒಂದೇ ರಾಷ್ಟ್ರವಲ್ಲ, ಅದೊಂದು ದೊಡ್ಡ ಖಂಡ, ಅನೇಕ ರಾಷ್ಟ್ರಗಳ ಗುಂಪು, ಅನೇಕ ಭಾಷೆ ಜಾತಿ, ಧರ್ಮ, ಸಂಸ್ಕೃತಿಗಳು ಅಲ್ಲಿರುವವು, ಒಂದೊಂದು ಪ್ರಾಂತವು ಒಂದು ರಾಷ್ಟ್ರವಿದ್ದಂತೆ ಇದೆ, ಅವುಗಳ ಹಿತಸಂಬಂಧಗಳು ಬೇರೆ ಬೇರೆ ಇರುವವು, ಪರಸ್ಪರ ವಿರೋಧ ವೈಮನಸ್ಸಗಳು ಪ್ರಾಂತಪ್ರಾಂತಗಳಲ್ಲಿ ಧರ್ಮಧರ್ಮಗಳಲ್ಲಿ ತುಂಬಿರುವವು ಇತ್ಯಾದಿ ಮಿಥ್ಯಾ ಭಾವನೆಗಳನ್ನು ಹಲವು ಪರಕೀಯ ಲೇಖಕರು ಹಾಗೂ ನಮ್ಮ ಹಿತಶತ್ರುಗಳಾದ ಬ್ರಿಟಿಶ ಆಳರಸರು ಹರಡಿರುವರು ಅವರ ಅಂಧಾನುಕರಣ ಮಾಡುವ ಕೆಲವು ಹಿಂದೀಯರು ಕೂಡ ಇದೇ ಕಲ್ಪನೆಗಳನ್ನು ತಲೆಯಮೇಲಿಟ್ಟುಕೊಂಡು ಕುಣಿಯುವರು. ಇಲ್ಲಿ ಸತತ ಅನೈಕ್ಯ, ಒಡಕು, ಒಳಜಗಳಗಳು ನಡೆಯಬೇಕೆಂದು ಪರಕೀಯ ಸತ್ತಾಧಾರಿಗಳು ಬಯಸುವದು ಸ್ವಾಭಾವಿಕ. ಆದರೆ ಈ ಬಗೆಯ ಮೋಸದಿಂದ ನಾವು ಮುಕ್ತರಾಗುವದು ಅವಶ್ಯ. ಈಚೆಗೆ ಹಲವು ಮುಸಲ್ಮಾನ ಬಾಂಧವರು ಈ ರಾಷ್ಟ್ರದಲ್ಲಿ ಹಿಂದೂ ಮುಸಲ್ಮಾನ ಎಂಬ ಎರಡು ರಾಷ್ಟ್ರಗಳಿರುವವೆಂದು ಪ್ರತಿಪಾದಿಸುತ್ತಿರುವರು. ಅದೇ ರೀತಿ ವರ್ಗಕಲಹವನ್ನು ಹೂಡಬೇಕೆನ್ನುವವರು, ಇದ್ದವರು ಇಲ್ಲದವರು ಎಂಬ ಎರಡು ಪರಸ್ಪರ ವಿರೋಧಿವರ್ಗಗಳು ದೇಶದಲ್ಲಿರುವರೆಂದು ಸಾರುವರು. ಈ ಜಾಡಿನ ಜಾಲವನ್ನೆಲ್ಲ ತನ್ನ ಅಮೃತಹಸ್ತದಿಂದ ಸವರಿ ಕಾಂಗ್ರೆಸ್ಸು, ಹಿಂದುಸ್ತಾನವೆಂಬುದೊಂದೇ ಒಂದು ರಾಷ್ಟ್ರ, ಪ್ರಾಂತಗಳೆಲ್ಲ ಸಹೋದರರು, ಹಿಂದೂ ಮುಸಲ್ಮಾನರು ಒಂದೇ ಹಿತಸಂಬಂಧವುಳ್ಳವರು, ಅಖಂಡವಾಗಿ ಈ ದೇಶದಲ್ಲಿ ಹರಿಯುತಿರುವ ಸಂಸ್ಕೃತಿಗಂಗೆಯು ಒಂದೇ ಒಂದು, ಜಾತಿ-ಮತ-ಪಂಥಗಳ ಸಮನ್ವಯ ಭೂಮಿ ಇದು, ಸಿರಿವಂತರ

ಬಡವರ ನಡುವೆ ಇರುವ ವಿಷಮತೆಗಳು ಸಹಜವಾಗಿ ಪರಿಹರಿಸುವ ಸಾಮರ್ಥ್ಯವು ನಮ್ಮಲ್ಲಿದೆ, ಆಸೇತು ಹಿಮಾಚಲ ವಾಸಿಸುತಿರುವ ನಾಲ್ವತ್ತುಕೋಟಿ ಒಂದೇ ಜನಾಂಗ, ಎಲ್ಲರ ಕಲ್ಯಾಣವನ್ನು ಸಾಧಿಸಿ ಸರ್ವೋದಯವನ್ನು ಪ್ರಸ್ಥಾಪಿಸುವದೆ ತನ್ನ ಗುರಿ ಎಂದು ಸಾರಿ, ಆ ಬಗೆಯ ಕಾರ್ಯಕ್ರಮಗಳನ್ನಿಟ್ಟುಕೊಂಡು ತನ್ನ ಕೆಲಸದಲ್ಲಿ ನಿಮಗ್ನವಾಗಿರುವದು. ಈಗ ಎರಡು ಮೂರು ಸಾವಿರ ವರುಷಗಳಿಂದ ಹಿಂದುಸ್ಥಾನಕ್ಕೆ ಬಂದು ಹೋದ ಪರಕೀಯರೆಲ್ಲರು ಇದು ಒಂದೇ ರಾಷ್ಟ್ರ ಎಂದು ಹೇಳುತ್ತ ಬಂದಿರುವರು. ಇಲ್ಲಿ ಸಾಕಷ್ಟು ವಿವಿಧತೆ ಇದೆ. ಆದರೆ ಆ ವಿವಿಧತೆಯಲ್ಲಿ ಒಂದು ಸ್ಪಷ್ಟವಾಗಿ ಒಡಮೂಡಿದ ಏಕಸೂತ್ರತೆ ಇದೆ. ಈಗ ರೂಪುಗೊಂಡು ನಿಂತ ನಮ್ಮ ಸಂಸ್ಕೃತಿಯ ಹಲವೊಂದು ಸಂಗತಿಗಳಲ್ಲಿ, ಹಿಂದುಸ್ಥಾನಿ ಭಾಷೆ, ವಾಸ್ತುಶಿಲ್ಪ, ಸಂಗೀತ, ಚಿತ್ರಕಲೆ, ಶಾಸನಶಾಸ್ತ್ರ ಮುಂತಾದವುಗಳಲ್ಲಿ ಹಿಂದೂ ಮುಸಲ್ಮಾನರಿಬ್ಬರೂ ಭಾಗವಹಿಸಿ ಅವುಗಳನ್ನು ಬೆಳೆಸಿದ್ದಾರೆ. ಹೋದ ೧೫೦ ವರುಷಗಳಿಂದ ಇಡೀ ಹಿಂದುಸ್ಥಾನವು ಒಂದೇ ಆಡಳಿತಕ್ಕೆ, ಸುಖದುಃಖಗಳಿಗೆ ಒಳಗಾಗಿ ಒಂದೇ ಬಗೆಯ ರಾಜಕೀಯ, ಆರ್ಥಿಕ, ವೈಜ್ಞಾನಿಕ ಹಿತಸಂಬಂಧಗಳನ್ನು ಬೆಳೆಸಿಕೊಂಡು ಬಂದಿದೆ. ನೈಸರ್ಗಿಕ ಭೌಗೋಲಿಕ ಭೂವಿಭಾಗಣೆ, ಲಷ್ಕರೀ ಸಂರಕ್ಷಣ ಈ ದೃಷ್ಟಿಯಿಂದಲೂ ಹಿಂದುಸ್ಥಾನವು ಒಂದೇ ರಾಷ್ಟ್ರವಿರುವದು. ಹಿಂದಿನ ಮಾತುಗಳು ಹಾಗಿರಲಿ, ಈಗ ನಾವು ಹಿಂದವಾಸಿಗಳೆಲ್ಲರೂ ಒಂದೇ ಒಂದು ಶೋಷಣಪ್ರಧಾನ ರಾಜ್ಯಸತ್ತೆಗೆ ಗುರಿಯಾಗಿ ಅತೀವ ದಾಸ್ಯದ ಸಮ ದುಃಖವನ್ನು, ಘೋರವಾದ ಅಪಮಾನವನ್ನು ಸಹಿಸಿ ತಲ್ಲಣಗೊಳ್ಳುತಿರುವೆವು. ಆ ದಾಸ್ಯದಿಂದ ಮುಕ್ತರಾಗಲು ಯತ್ನಿಸುತಿರುವೆವು. ಈ ಆಯಕಟ್ಟಿನ ಸಂದರ್ಭದಲ್ಲಿ ಒಡಕಿನ ಇಲ್ಲವೆ ಭೇದಭಾವದ ಬೀಜಗಳನ್ನು ಬಿತ್ತಲಿಕ್ಕೆ ಯತ್ನಿಸುವದೆಂದರೆ ಇಡೀ ಜನಾಂಗದ ವಿರುದ್ಧ ಮತ್ತು ತಮ್ಮ ವಿರುದ್ಧ ಸಹ ದ್ರೋಹವನ್ನಾಚರಿಸಿದಂತೆಯೆ ಸೈ. ನಮ್ಮ ನಮ್ಮೊಳಗೆ ಯಾವದೇ ವಿವಿಧತೆ, ವಿರೋಧ ಇದ್ದರೂ ಅದನ್ನು ಸರಿಪಡಿಸಲು ನಾವೇ ಹೆಣಗಬೇಕು ಹೊರತು ಅನ್ಯರನ್ನು ಆ ಕೆಲಸಕ್ಕೆ ಕರೆದರೆ ಅವರು ನಮ್ಮಿಬ್ಬರ ತಲೆಯಮೇಲೂ ಕೈಯಾಡಿಸಿ ಬಿಡುವರು.

---

## ರಾಷ್ಟ್ರೀಯತೆಯ ಪ್ರತೀಕ

ಹೀಗಿರುವಾಗ ನಮ್ಮ ಪ್ರಾಂತಗಳ ನಡುವೆ ಒಂದು ಸಾಮಾನ್ಯ ಭಾಷೆಯ ಸೇತುವೆಯನ್ನು ಕಟ್ಟಿ, ನಮ್ಮ ಸಂಸ್ಕೃತಿ ಒಂದಿದ್ದಂತೆ, ನಮ್ಮ ಹಿತ ಸಂಬಂಧಗಳು ಒಂದಿದ್ದಂತೆ,ನಮ್ಮ ರಾಷ್ಟ್ರದ ಭೂಜಲವಾಯು ಆಕಾಶಗಳು ಒಂದಿರುವಂತೆ, ನಮ್ಮ ರಾಷ್ಟ್ರದ ಭಾಷೆಯೂ ಒಂದಿದೆ ಎನ್ನಲು ಅವಕಾಶವನ್ನುಂಟು ಮಾಡುವದು ನಮ್ಮ ಕರ್ತವ್ಯವಿರುವದು. ಹಾಗೆ ಮಾಡದೆಹೋದರೆ ನಮ್ಮ ತಾಯಿಯ ಕಣ್ಣು, ಮೂಗು, ಮುಖಮುದ್ರೆ ನಕ್ಷತ್ರದಂತೆ ಇವೆ, ಆಕೆ ಲೋಕಸುಂದರಿ, ಆದರೆ ಆಕೆ ಮೂಕಿ ಎಂದು ಹೇಳಿದಂತಾಗುವದು. ಹಿಂದುಸ್ತಾನಿ ಎಂಬುದು ಕೇವಲ ಒಂದು ಭಾಷೆಯ ವಿಷಯವಿದ್ದರೆ ಅದಕ್ಕೆ ನಾವು ಇಷ್ಟೊಂದು ಮಹತ್ವ ಕೊಡುವ ಕಾರಣವಿರಲಿಲ್ಲ. ಅದರೊಡನೆ ನಾವು ಏಕರಾಷ್ಟ್ರೀಯತೆಯ ಭಾವವನ್ನು, ರಾಷ್ಟ್ರೀಯ ಜಾಗ್ರತಿಯನ್ನು, ಹರಡಬೇಕೆನ್ನುತ್ತೇವೆ ಪರಕೀಯರ ಭಾಷಾಪ್ರಭುತ್ವವನ್ನು ತಪ್ಪಬೇಕೆನ್ನುತ್ತೇವೆ. ನಮ್ಮದೇ ಒಂದು ಆದ ರಾಷ್ಟ್ರಭಾಷೆ ನಮಗಿದೆ ಎಂಬ ಅಭಿಮಾನವನ್ನು ಹುಟ್ಟಿಸಬೇಕೆನ್ನುತ್ತೇವೆ. ಹಿಂದೂ ಮುಸಲ್ಮಾನರ ಬಾಂಧವ್ಯವನ್ನು ಸಾಧಿಸಬೇಕೆನ್ನುತ್ತೇವೆ ನಾವು ಕೇವಲ ಪ್ರಾಂತಗಳಲ್ಲಿ, ಪ್ರಾಂತಗಳ ಆಚೆಗೆ ಪ್ರಾಂತಗಳಿಗಿಂತ ಶ್ರೇಷ್ಠನಾದ ಒಂದು ರಾಷ್ಟ್ರದವರು ಎಂಬುದನ್ನು ಅನುಭವಿಸಬೇಕೆನ್ನುತ್ತೇವೆ. ಅಲ್ಲಿ ಇಲ್ಲಿ ಪ್ರಾಂತದ ದುರಭಿಮಾನವು ಹೆಚ್ಚುತ್ತಿದ್ದರೆ ಅದನ್ನು ಸರಿಯಾಗಿ ಹಿಡಿತೆಯಲ್ಲಿಡಬೇಕೆನ್ನುತ್ತೇವೆ. ಈ ಎಲ್ಲ ಮಾತುಗಳಿಗಾಗಿ ನಮಗೆ ಹಿಂದುಸ್ತಾನಿ ಎಂಬ ರಾಷ್ಟ್ರಭಾಷೆ ಬೇಕು. ಹಿಂದುಸ್ತಾನಿಯು ಈ ಎಲ್ಲವುಗಳ ಪ್ರತೀಕವು ಆಗುವದರಿಂದಲೆ ಅದಕ್ಕೆ ಇಷ್ಟು ಮಹತ್ವವು.

## ಹಿಂದುಸ್ತಾನಿಯ ಇತಿಹಾಸ

ಇನ್ನು ಹಿಂದುಸ್ತಾನಿಯ ಸ್ವಲ್ಪ ಇತಿಹಾಸವನ್ನು ನೋಡುವದು ಅಪ್ರಸ್ತುತವಾಗಲಿಕ್ಕಿಲ್ಲ. ಮೂಲತಃ ಈ ಭಾಷೆ ಹಿಂದುಸ್ತಾನದಲ್ಲಿಯೆ ಹಿಂದುಸ್ತಾನದ ಭಾಷೆಗಳಿಂದಲೆ ಹುಟ್ಟಿದುದು. ಕ್ರಿಸ್ತಶಕದ ೧೦೦೦ ದ ಸುಮಾರಕ್ಕೆ ಗಂಗಾನದಿಯ ವಿಶಾಲವಾದ ಪಾತ್ರದ ಗುಂಟ ಪ್ರಯಾಗದಿಂದ ಕಾಶಿಯವರೆಗೆ

ಪಟ್ಟಾಗಿ ವಾಸವಾಗಿದ್ದ ಜನರ ಶೌರಸೇನಿ, ಅರ್ಧಮಾಗಧಿ ಎಂಬ ಪ್ರಾಕೃತ ಭಾಷೆಗಳಿಂದ ಈ ಹಿಂದುಸ್ತಾನಿ ಎಂಬುದು ಮೊದಲು ಉಗಮಹೊಂದಿತು. ಆದಕ್ಕೂ ಮೊದಲು 'ಹಿಂದಿ' ಅಥವಾ 'ಹಿಂದುಸ್ತಾನಿ" ಎಂಬ ಭಾಷೆ ಅಥವಾ ಹೆಸರು ಅಸ್ತಿತ್ವದಲ್ಲಿದ್ದಂತೆ ಕಂಡುಬರುವದಿಲ್ಲ. 'ಬೀಸಿಲ ದೇವ ರಾಸೋ' ಮತ್ತು ಪೃಥ್ವಿರಾಜ ರಾಸೋ' ಎಂಬ ವೀರ ಕಾವ್ಯಗಳು ೧೨ನೆ ಶತಮಾನ ದಲ್ಲಿ ಬರೆಯಲಾದವು ಇವೇ ಈ ಭಾಷೆಯ ಪ್ರಥಮ ಸಾಹಿತ್ಯಪ್ರಯತ್ನ ಗಳು. ಇವುಗಳಿಗೆ ಚಾರಣಕಾವ್ಯಗಳು ಎಂಬ ಹೆಸರು ಇರುವದು. ಭಟ್ಟಂಗಿಗಳು ಹಾಡತಕ್ಕ ವೀರರ ಪ್ರಶಂಸಾಪರ ಕಾವ್ಯಗಳಿವು. ಮುಂದೆ ವಿದ್ಯಾಪತಿ, ಕಬೀರ, ಅಮೀರ, ಖುಸ್ರು, ಬಾಕೋರ, ಆಗಾ ಮುಂತಾದ ಕವಿ ಗಳೂ ಗರ್ಘುನವಿ ಎಂಬ ನಿಘಂಟುಕಾರನೂ ೧೬ನೆ ಶತಮಾನದ ಪ್ರಾರಂಭದ ವರೆಗೆ ಆಗಿಹೋದರು. ಪ್ರಥಮದಲ್ಲಿ 'ಹಿಂದಿ', 'ಹಿಂದು', ಅಥವಾ 'ಹಿಂದು ಸ್ತಾನಿ' ಎಂಬದು ಒಂದೇ ಇದ್ದರೂ ಆದರಲ್ಲಿ ಮುಖ್ಯವಾಗಿ ಅವಧಿ ಮತ್ತು ವ್ರಜಭಾಷೆ ಎಂಬ ಎರಡು ಪರ್ಯಾಯಗಳಾದವು ಇವೆರಡರಲ್ಲಿ ಸಾಕಷ್ಟು ಸಾಹಿತ್ಯವು ೧೫೦೦-೧೮೦೦ರ ವರೆಗೆ ನಿರ್ಮಾಣವಾಯಿತು ಪದ್ಮಾವತ ಹಾಗೂ ತುಲಸೀದಾಸಕೃತ ಶ್ರೀರಾಮಚರಿತ ಮಾನಸ ಎಂಬ ಗ್ರಂಥಗಳು ಅತಿಶಯ ಪ್ರಸಿದ್ಧವಿರುವವು. ಇವು ಈ ಭಾಷೆಗೆ ಸ್ಥಿರರೂಪವನ್ನು ಕೊಟ್ಟವು. ಇದೇ ಕಾಲದಲ್ಲಿ ಕೇಶವದಾಸ, ಮೀರಾಬಾಯಿ, ಸೂರದಾಸ, ರಹೀಮ, ರಸಖಾನ, ದೇವ, ಮತಿರಾಮ, ಜೈಸೀ, ಆ್ಯನಿಸ್ ಮುಂತಾದ ಕವಿಗಳು ಶ್ರೇಷ್ಠ ಮತ್ತು ವಿವಿಧ ಕಾವ್ಯಗಳನ್ನು ಬರೆದರು. ಈ ಭಾಷೆ ಮುಖ್ಯವಾಗಿ ಬೆಳೆದ ಕ್ಷೇತ್ರ ವೆಂದರೆ, ಪಶ್ಚಿಮದಲ್ಲಿ ಜೆಸಲ್ ಮೀರ, ಉತ್ತರಪಶ್ಚಿಮದಲ್ಲಿ ಅಂಬಾಲಾ, ಉತ್ತರ ದಲ್ಲಿ ಸಿಮ್ಲಾದಿಂದ ನೇಪಾಲದ ವರೆಗಿನ ಹಿಮಾಚಲದ ದಕ್ಷಿಣಭಾಗ, ಪೂರ್ವ ದಲ್ಲಿ ಭಾಗಲಪೂರ, ದಕ್ಷಿಣಪೂರ್ವದಲ್ಲಿ ರಾಯಪೂರ, ಮತ್ತು ದಕ್ಷಿಣ ಪಶ್ಚಿಮ ದಲ್ಲಿ ಖಾಂಡವಾ ಈ ಪಟ್ಟಣಗಳಿಂದ ಸೀಮಿತವಾದ ಪ್ರದೇಶದಲ್ಲಿ ಈ ಭಾಷೆ ಬೆಳೆಯಿತು.

ಇತ್ತ ಈ ಭಾಷೆ ಹೀಗೆ ಪ್ರಗತಿಹೊಂದುತ್ತಿರುವಾಗಲೆ ೧೬, ೧೭, ೧೮ನೇ ಶತಮಾನಗಳಲ್ಲಿ ಮುಸಲ್ಮಾನ ಅರಸರ ಮತ್ತು ಬಾದಶಹರ ವರ್ಚಸ್ಸು ಅಲ್ಲಲ್ಲಿ

ಹೆಚ್ಚಾಗುತ್ತ ನಡೆದಿತ್ತು. ಅವರು ಎಲ್ಲೇ ಆಳಿದರೂ ಫಾರಸಿಯನ್ನು ತಮ್ಮ ದರಬಾರ ಭಾಷೆಯನ್ನಾಗಿ ಉಪಯೋಗಿಸುತ್ತಿದ್ದರು; ಆ ಮೂಲಕ ಪಟ್ಟಣಗಳಲ್ಲಿ ಹಾಗೂ ದರಬಾರೀ ಜನರಲ್ಲಿ ಅದರ ಪ್ರಸಾರವಾಗುತ್ತ ನಡೆದಿತ್ತು. ಅದು ಜನಸಾಮಾನ್ಯರ ಭಾಷೆ ಎಂದೂ ಆಗಲಿಲ್ಲ. ಅವರ ಭಾಷೆಯು ಹಿಂದಿಯೆ ಉಳಿಯಿತು. ೧೩ನೆ ಶತಮಾನದಿಂದಲೆ ಹಿಂದೀ ಭಾಷೆಯಲ್ಲಿ ಹಲ ಕೆಲವು ಫಾರಸಿ, ಅರಬೀ ಶಬ್ದಗಳು ಮುಸಲ್ಮಾನರ ಸಂಪರ್ಕದಿಂದ ಬರಲಾರಂಭಿಸಿದ್ದುವು. ಮುಸಲ್ಮಾನರು ಅದೇ ಭಾಷೆಯಲ್ಲಿ ಜನಸಾಮಾನ್ಯರೊಡನೆ ಮಾತಾಡಬೇಕಾಗುತ್ತಿತ್ತು. ಬರಬರುತ್ತ ಅದಕ್ಕೆಯೆ ಖಡೀ ಬೋಲಿ ಎಂಬ ಹೆಸರಾಯಿತು. ವಿಶೇಷತಃ ದಿಲ್ಲಿ ಮತ್ತು ಮಿರತದ ಸುತ್ತುಮುತ್ತು ಮಾತಾಡಲಾದ ಭಾಷೆಗೆ ಈ ಹೆಸರಾಯಿತು.

ಹಿಂದು ಮುಸಲ್ಮಾನರ ಸಂಪರ್ಕವು ಹೆಚ್ಚುತ್ತ ಹೋದಂತೆ ಈ ಖಡೀ ಬೋಲಿ ಎಂಬದರಲ್ಲಿ ಫಾರಸಿ ಮುಂತಾದ ಶಬ್ದಗಳೂ ಹಲವು ಫಾರಸೀ ವಾಕ್ಪ್ರಚಾರಗಳೂ ಬಂದು ಸೇರಿದವು. ವಿಶೇಷತಃ ಲಷ್ಕರೀ ಠಾಣ್ಯಗಳಿದ್ದಲ್ಲಿ ಸಂತೆ ಪೇಟೆಗಳಿದ್ದಲ್ಲಿ ಮಾತಾಡಲಾಗುವ ಭಾಷೆಯ ಸ್ವರೂಪವು ಸ್ವಲ್ಪ ಗ್ರಂಥಸ್ಥ ಭಾಷೆಗಿಂತ ಬದಲಾಗಿ ಆ ಬದಲಾದ ಭಾಷೆಯಲ್ಲಿಯೂ ಗ್ರಂಥ ರಚನೆ ನಡೆಯಿತು. ಆ ಭಾಷೆಗೆ ಹಲವರು 'ಉರ್ದು' ಅಂದರೆ ಸೈನ್ಯ, ಸೈನ್ಯದ ಪಾಳ್ಯ, ಸೈನ್ಯದ ಪಾಳ್ಯದಲ್ಲಿ ಹುಟ್ಟಿದ ಭಾಷೆ ಎಂದು ಅನ್ನಲಾರಂಭಿಸಿದರು. 'ಉರ್ದು' ಶಬ್ದವನ್ನು ಮೊದಲು ಮುಶಾಫಿ ಎಂಬವನು ೧೯ನೆ ಶತಮಾನದ ಪ್ರಾರಂಭದಲ್ಲಿ ಉಪಯೋಗಿಸಿರಬೇಕು. ೧೭೫೨ರಲ್ಲಿ, ೧೭೫೮ರಲ್ಲಿ, ಮುಂದೆ ೧೭೭೦ರಲ್ಲಿ ಜಬಾನ್-ಈ-ಊರ್ದು 'ಉರ್ದು ಭಾಷೆ' ಎಂಬ ಉಲ್ಲೇಖವು ಬೇರೆ ಬೇರೆ ಕಡೆಗೆ ದೊರೆಯುವದು. ಇದಕ್ಕೆಯೆ ಹಲವರು ಹಿಂದುಸ್ತಾನಿ (ವಜಾಹಿ ೧೬೩೫ರಲ್ಲಿ) ಎನ್ನುತ್ತಿದ್ದರು. ೧೬-೧೭ನೆ ಶತಮಾನಗಳಲ್ಲಿ ಹಿಂದುಸ್ತಾನಿ ಎಂಬ ಹೆಸರು ರೂಢವಿತ್ತು ಎಂದು ಹೇಳಬಹುದು. ಪಾಶ್ಚಾತ್ಯ ಪ್ರವಾಸಿಗಳು ಸಹ (ಟೆರಿ ೧೬೧೬, ಫ್ರಾಯರ ೧೬೭೩, ಕೆಟೆಲೆಯರ ೧೭೧೫) ಈ ಭಾಷೆಯನ್ನು ಹಿಂದುಸ್ತಾನಿ ಎಂದೆ ಸಂಭೋದಿಸುತಿದ್ದರೂ ಈ ರೀತಿ ಹಿಂದಿ, ಹಿಂದವಿ, ಹಿಂದುಸ್ತಾನಿ, ಖಡೀ ಬೋಲಿ, ಊರ್ದು ಇವೆಲ್ಲ ಸಾಧಾರಣವಾಗಿ ಸಮಾನಾರ್ಥಕವಾಗಿಯೆ ಉಪಯೋಗಿಸಲಾಗುತಿದ್ದವೆಂದರೆ ತಪ್ಪಾಗಲಿಕ್ಕಿಲ್ಲ.

ಹಿಂದು (ಸಿಂಧು ನದದ ಪ್ರದೇಶದಲ್ಲಿರುವವರು), ಹಿಂದಿ, ಹಿಂದವಿ,ಹಿಂದುಸ್ತಾನಿ ಈ ಹೆಸರುಗಳನ್ನು ಹೊರಗಿನಿಂದ ಬಂದವರು, ಮುಸಲ್ಮಾನರು ಮೊದಲು ಉಪಯೋಗಿಸಿದರು ಎಂದು ಹೇಳಲು ಅಡ್ಡಿಯಿಲ್ಲ.

ಇಲ್ಲಿಯ ವರೆಗೆ ಸರಿಹೋಯಿತು. ಮುಂದೆ ಬ್ರಿಟಿಶರ ಪ್ರವೇಶವಾಗಿ ಅವರ ಹಸ್ತಕ್ಷೇಪಕ್ಕೆ ಪ್ರಾರಂಭವಾಯಿತು ಆ ಕಾಲಕ್ಕೆ ಅಂದರೆ ಸುಮಾರು ೧೯ನೆ ಶತಮಾನದ ಪ್ರಾರಂಭಕ್ಕೆ ಹಿಂದುಸ್ತಾನಿಯ ಸ್ಥಿತಿಯು ಏನಿತ್ತೆಂದರೆ, ಅದರಲ್ಲಿ ಫಾರಸಿ, ಅರಬಿ, ಸಂಸ್ಕೃತ ಈ ಮೂರೂ ಭಾಷೆಗಳಲ್ಲಿಯ ಸುಲಭ ಶಬ್ದಗಳ ಸಂಮಿಶ್ರ ಉಪಯೋಗವು ನಡೆಯುತಿತ್ತು. ಹಿಂದು ಮುಸಲ್ಮಾನ ರಿಬ್ಬರೂ ಯಾವದೇ ಸಂಕೋಚ, ಭೇದಭಾವ, ಅಭಿನಿವೇಶ ಇಲ್ಲದೆ ಆ ಭಾಷೆಯನ್ನು ಉಪಯೋಗಿಸುತ್ತಿದ್ದರು. ಅದು ಜನಸಾಮಾನ್ಯರಲ್ಲಿ ರೂಢ ವಾಗುತ್ತ ನಡೆದಿತ್ತು. ಆ ಭಾಷೆಯ ರಚನೆ, ವ್ಯಾಕರಣ, ಕಟ್ಟು ಇವೆಲ್ಲ ಮೂಲ ಪ್ರಾಕೃತದಿಂದ ಹುಟ್ಟಿ ಬೆಳೆದು ಬಂದಿದ್ದವು. ನಾಗರಿ ಹಾಗೂ ಫಾರಸೀ ಹೀಗೆ ಎರಡೂ ಲಿಪಿಯಲ್ಲಿ ಅದು ಬರೆಯಲಾಗುತಿತ್ತು. ಇದೇ ಭಾಷೆ ಯಲ್ಲಿ ಮುಂದೆ ಎರಡು ಪ್ರವೃತ್ತಿಗಳು ಉಂಟಾಗಿ ಅವು ಪ್ರಬಲವಾಗುತ್ತ ನಡೆದವು. ಒಂದು ಪ್ರವೃತ್ತಿಯ ಮೂಲಕ ಈ ಭಾಷೆಯ ಶಾಖೆಯೊಂದು ಸಂಸ್ಕೃತಪ್ರಧಾನವಾಗಿ ನಾಗರಿಯಲ್ಲಿಯೆ ಬರೆಯುವ ಹಟಹಿಡಿದು ಹಿಂದಿ ಎನಿಸಲಾರಂಭಿಸಿತು. ಇನ್ನೊಂದು ಪ್ರವೃತ್ತಿಯ ಮೂಲಕ ಫಾರಸಿ ಲಿಪಿ ಯನ್ನೆ ಉಪಯೋಗಿಸುತ್ತ ಊರ್ದು ಎನಿಸಲಾರಂಭಿಸಿತು. ಬರಬರುತ್ತ ಈ ಭಿನ್ನಪ್ರವೃತ್ತಿಗಳಿಗೆ ಹಿಂದು ಮುಸಲ್ಮಾನರ ಭೇದಭಾವದ ಬೆಂಬಲವು ದೊರೆಯಿತು.

ಹೀಗಾಗುವ ಕಾರಣಗಳೇನು? ೧೯ನೆ ಶತಮಾನದ ಪ್ರಾರಂಭದ ವರೆಗೆ ಏಕರೂಪವಾಗಿ ಹರಿಯುತ್ತ ಬಂದ ಹಿಂದುಸ್ತಾನಿಯ ಪ್ರವಾಹವು ಒಡೆದು ಹೋಗಿ ಹಿಂದೀ ಊರ್ದು ಎಂದು ಎರಡು ಕಾಲುವೆಗಳಲ್ಲಿ ಏಕೆ ಹರಿಯಲಾ ರಂಭಿಸಿತು? ಎಂದಿನಂತೆ ಭೇದಭಾವನೆ ಹಾಗೂ ಒಡಕು ಹುಟ್ಟಿಸುವದರಲ್ಲಿ ನಿಷ್ಣಾತರಿರುವ ಬ್ರಿಟಿಶರ ಕೈವಾಡವು ಇದರಲ್ಲಿಯೂ ಕಂಡುಬರುತಿರುವದು. ಕಲಕತ್ತೆಯ ಫೋರ್ಟ ವುಯಿಲ್ಯಮ್ ಕಾಲೇಜದ ಪ್ರಾಧ್ಯಾಪಕರು ಹಲವರು

ಮತ್ತು ಜಾನ್ ಗಿಲ್ ಕ್ರಾಯಿಸ್ಟರು ಹಿಂದುಗಳ ಸಲುವಾಗಿ ಸಂಸ್ಕೃತಪ್ರಧಾನ ವಾಙ್ಮಯವನ್ನು ನಿರ್ಮಿಸುವ ಹೊಣೆಯನ್ನು ೧೯ನೆ ಶತಮಾನದ ಪ್ರಾರಂಭಕ್ಕೆ ಹೊತ್ತರು. ಅವರು ಲಲ್ಲುಲಾಲ ಮತ್ತು ಸದಾಲಮಿಶ್ರ ಎಂಬ ಇಬ್ಬರನ್ನು ಆ ಕೆಲಸಕ್ಕೆ ನೇಮಿಸಿದರು. ಅವರು ಪ್ರೇಮಸಾರ ಮುಂತಾದ ಹಲವು ಗ್ರಂಥ ಗಳನ್ನು ರಚಿಸಿದರು ಅರಬೀ ಫಾರಸೀ ಶಬ್ದಗಳನ್ನು ಆದಷ್ಟು ಕಿತ್ತಿಹಾಕಿ ಅವುಗಳ ಬದಲು ಸಂಸ್ಕೃತ ಶಬ್ದಗಳನ್ನು ಹಾಕುವದೆ ಅವರ ಉದ್ಯೋಗ ವಾಗಿತ್ತು. ಮಿ. ಕೇ ಎಂಬವರು ಹಾಗೂ ಶ್ರೀ. ಗುಲೇರಿಯವರು ಈ ಪ್ರಯ ತ್ನದ ಉಲ್ಲೇಖವನ್ನು ತಮ್ಮ ಲೇಖನಗಳಲ್ಲಿ (ಹೆರಿಟೇಜ ಆಫ್ ಇಂಡಿಯಾ, ಹಿಂದೀ ಲಿಟರೇಚರ ಮತ್ತು ನಾಗರೀ ಪ್ರಚಾರಿಣಿ ಪತ್ರಿಕಾ, ೧೯೨೧) ಮಾಡಿರುವರು. ಈ ಪ್ರವೃತ್ತಿಗೆ ಬ್ರಿಟಿಶ ಪಂಡಿತರು ಕಾರಣರಾದುದಕ್ಕೆ ಭಾಷಾಶಾಸ್ತ್ರಜ್ಞನಾದ ಗ್ರಿಯರಸನ್ನನು ಒಂದೆಡೆ ತನ್ನ ವಿಷಾದವನ್ನು ವ್ಯಕ್ತ ಮಾಡಿರುವನು. ಅವನು ಇದಕ್ಕೆ ಅಡ್ಡದಾರಿಗೆ ಹೋಗುವ ಪ್ರಯತ್ನ ಎಂದಿ ದ್ದಾನೆ. ಏನೇ ಇರಲಿ, ಈ ಪ್ರವೃತ್ತಿಯೊಡನೆಯೆ ಮುಸಲ್ಮಾನರಲ್ಲಿ ಅರಬೀ ಫಾರಸೀ ಶಬ್ದಗಳನ್ನು ಹೆಚ್ಚು ಉಪಯೋಗಿಸುವ ಪ್ರಘಾತ ಬೆಳೆಯುತ್ತ ನಡೆ ಯಿತು. ಹೀಗಾಗಿ ಹಿಂದೀ-ಊರ್ದು ವಾದವು ಅಸ್ತಿತ್ವದಲ್ಲಿ ಬಂದಿತು.

ನಿಜವಾಗಿ ನೋಡಿದರೆ ಹಿಂದುಸ್ತಾನಿಯೆ ಮುಖ್ಯ ಭಾಷೆ. ಹಿಂದೀ ಊರ್ದು ಇವೆರಡು ಅದರಲ್ಲಿಯ ಎರಡು ವಿಶಿಷ್ಟ ಪ್ರವೃತ್ತಿಗಳ ಮೂಲಕ ಉಂಟಾದ ಶಾಖೆಗಳು ಯಾಕಂದರೆ ಯಾವದೇ ಭಾಷೆಯಲ್ಲಿ ಧ್ವನಿ, ವಾಕ್ಯ ರಚನೆ, ವ್ಯಾಕರಣ ಇವು ಮುಖ್ಯ ಹೊರತು ಶಬ್ದಗಳು ಮುಖ್ಯವಲ್ಲ ಈ ದೃಷ್ಟಿಯಿಂದ ಹಿಂದೀ ಊರ್ದು ಭಾಷೆಗಳು ಬೇರೆ ಎಂದು ಯಾವ ಭಾಷಾ ಕೋವಿದನೂ ಅನ್ನಲಾರನು. ಕೇವಲ ಶಬ್ದಗಳಲ್ಲಿ ಭಿನ್ನತೆ ಇದೆ, ಅಷ್ಟರ ಮೇಲಿಂದ ಅವು ಭಿನ್ನ ಭಾಷೆಗಳೆನಿಸಲಾರವು

ಭಾಷಾಭಿಜ್ಞನಾದ ಗ್ರಿಯರಸನ್ನನು ಹಿಂದುಸ್ತಾನಿಯ ವ್ಯಾಖ್ಯೆಯನ್ನು ಈ ರೀತಿ ಮಾಡಿರುವನು. ಹಿಂದುಸ್ತಾನಿಯು ಮೂಲತಃ ಉತ್ತರ ಗಂಗಾತಟಾ ಕದ ಭಾಷೆಯು. ಅದು ಹಿಂದುಸ್ತಾನದ ರಾಷ್ಟ್ರಭಾಷೆಯೂ ಆಹುದು. ಅದನ್ನು ಬರೆಯುವಾಗ ಫಾರಸಿ ಹಾಗೂ ನಾಗರೀ ಲಿಪಿಗಳೆರಡನ್ನು ಉಪಯೋಗಿಸಲು

ಬರುವದು. ಫಾರಸಿ ಇಲ್ಲವೆ ಸಂಸ್ಕೃತ ಶಬ್ದಗಳನ್ನೆ ಉಪಯೋಗಿಸಬೇಕೆಂಬ ಛಲವಿಲ್ಲದೆ ಎರಡನ್ನೂ ಮಿತವಾಗಿ ಉಪಯೋಗಿಸಿ ಸಾಹಿತ್ಯವನ್ನು ಬರೆಯಲು ಬರುವದು. ಯಾವ ಹಿಂದುಸ್ತಾನಿಯಲ್ಲಿ ಫಾರಸೀ ಶಬ್ದಗಳು ಹೆಚ್ಚು ಉಪಯೋಗಿಸಲಾಗಿವೆಯೊ ಅದಕ್ಕೆಯೆ ಊರ್ದು ಎಂಬ ಹೆಸರು. ಅದೇರೀತಿ ಯಾವ ಹಿಂದುಸ್ತಾನಿಯಲ್ಲಿ ಸಂಸ್ಕೃತ ಶಬ್ದಗಳು ಹೆಚ್ಚೊ ಅದು ಹಿಂದೀ.

ಈ ಹಿಂದೀ ಊರ್ದುವಾದ ಮತ್ತು ಅದರ ಬಗ್ಗೆ ಇರತಕ್ಕ ನಮ್ಮ ಧೋರಣ ಇದನ್ನು ಕುರಿತು ಯೋಗ್ಯ ಸ್ಥಾನದಲ್ಲಿ ವಿಚಾರಮಾಡಲಾಗುವದು. ಇನ್ನು ಈ ಹಿಂದುಸ್ತಾನಿ ಪ್ರಚಾರದ ಚಳವಳಿಯ ರೂಪರೇಷೆಯನ್ನು ಸ್ವಲ್ಪ ನೋಡುವ.

## ಹಿಂದುಸ್ತಾನಿ ಚಳವಳಿ

ಅಲ್ಲಲ್ಲಿ ಅನೇಕರಿಗೆ ರಾಷ್ಟ್ರಭಾಷೆ ಎಂಬುದೊಂದು ಬೇಕು ಎಂದು ಎಷ್ಟೇ ಎನಿಸಿದರೂ ಅಖಿಲ ಭಾರತೀಯ ಸ್ವರೂಪದ ಚಳವಳಿಯನ್ನು ಯಾರೂ ಕೈಕೊಳ್ಳಲಿಲ್ಲ. ಯುಕ್ತಪ್ರಾಂತ ಬಿಹಾರಗಳಲ್ಲಿ ಹಿಂದುಸ್ತಾನಿಯೆ ಸಕಲ ಜನರ ಭಾಷೆಯಾಗಿದ್ದರೂ ಅದರಲ್ಲಿ ಮೇಲೆ ಹೇಳಿದ ಎರಡು ಪ್ರವೃತ್ತಿಗಳು ಬಲವಾಗಿ ಬೆಳೆದು ಆ ವಾದಕ್ಕೊಂದು ಮೇಲಾಟದ ಅಥವಾ ತುರಸಿನ ಸ್ವರೂಪವು ಬಂದುಬಿಟ್ಟಿತ್ತು. ಹಿಂದೂ ಮುಸಲ್ಮಾನ ವಾದದ ಬಣ್ಣವೂ ಅದಕ್ಕೆ ಬಳಿದಂತಾಗಿತ್ತು. ಆದುದರಿಂದ ರಾಷ್ಟ್ರಭಾಷೆ ಎಂಬ ದೃಷ್ಟಿಯಿಂದ ಹಿಂದುಸ್ತಾನಿಯತ್ತ ನೋಡುವ ಪ್ರವೃತ್ತಿಯೆ ಅಲ್ಲಿ ಕಂಡುಬರುತಿರಲಿಲ್ಲ. ಅಥವಾ ಎರಡು ಪಕ್ಷದವರು ತಮ್ಮದೇ ರಾಷ್ಟ್ರಭಾಷೆ ಆಗಬೇಕೆಂದು ಇಚ್ಛಿಸುತಿದ್ದರು ಎಂದರೂ ಸಲ್ಲುವದು. ಉತ್ತಮ ರೋಗಚಿಕಿತ್ಸಕರಂತೆ ಗಾಂಧೀಜಿಯವರು ಹಿಂದುಸ್ತಾನದ ರೋಗನಿದಾನವನ್ನು ಮಾಡಿಕೊಡಲವಶ್ಯವಿದ್ದ ಔಷಧಗಳಲ್ಲಿ ಹಿಂದುಸ್ತಾನಿ ಭಾಷೆಯೂ ಒಂದು ಅವಶ್ಯ ಎಂಬುದನ್ನು ಅವರು ದಕ್ಷಿಣ ಆಫ್ರಿಕೆಯಲ್ಲಿರುವಾಗಲೆ ನಿರ್ಣಯಿಸಿದರು. ಅಲ್ಲಿ ಮನೆಮಕ್ಕಳಿಗೆ ಹಾಗೂ ಟಾಲಸ್ಟಾಯ ಫಾರ್ಮ ಮತ್ತು ಫಿನಿಕ್ಸಪಾರ್ಕದಲ್ಲಿರುವವರಿಗೆಲ್ಲ ಅವರು ಮಾತೃಭಾಷೆಯಲ್ಲದೆ ಹಿಂದುಸ್ತಾನಿಯನ್ನೂ ಕಲಿಸುತ್ತಿದ್ದರು. ಅವರ

ಹಿಂದುಸ್ತಾನಕ್ಕೆ ಬರುವದಕ್ಕೂ ಪೂರ್ವದಲ್ಲಿ ಎಷ್ಟೋ ವರುಷ ಅಂದರೆ ೧೯೦೮ರಲ್ಲಿಯೆ 'ಹಿಂದಸ್ವರಾಜ್ಯ' ಎಂಬ ತಮ್ಮ ತತ್ವಗಳ ಬೀಜಭೂತವಾದ ಪುಸ್ತಕವನ್ನು ಪ್ರಕಟಿಸಿದರು. ಆ ಪುಸ್ತಕದ ಶಿಕ್ಷಣಪ್ರಕರಣದಲ್ಲಿ ಅವರು, 'ತನ್ನ ಪ್ರಾಂತೀಯ ಭಾಷೆಯಲ್ಲದೆ ಪ್ರತಿಯೊಬ್ಬ ಹಿಂದವಾಸಿಯು ಹಿಂದೀ (ಹಿಂದುಸ್ತಾನಿ) ಭಾಷೆಯೊಡನೆ ಪರಿಚಿತನಿರಬೇಕು... ಹಿಂದುಸ್ತಾನದ ರಾಷ್ಟ್ರ ಭಾಷೆ ಹಿಂದೀ (ಹಿಂದುಸ್ತಾನಿ) ಇರಬೇಕು. ಅದನ್ನು ಫಾರಸಿ ಹಾಗೂ ನಾಗರಿ ಲಿಪಿಯಲ್ಲಿ ಬರೆಯಬೇಕು. ಹಿಂದು ಮುಸಲ್ಮಾನರ ಸಂಬಂಧವು ನಿಕಟವಾಗಿತ್ತ ಹೋಗುವದಕ್ಕಾಗಿ ಎರಡೂ ಲಿಪಿಗಳ ಉಪಯೋಗಮಾಡ ಬೇಕು. ಹೀಗೆ ಮಾಡಿದರೆ ನಾವು ಇಂಗ್ಲೀಷನ್ನು ಬೇಗನೆ ಹೊರಗೆ ಹಾಕ ಬಲ್ಲೆವು,' ಬರೆದಿರುವರು. ಮುಂದೆ ಹಿಂದುಸ್ತಾನಕ್ಕೆ ಬಂದಬಳಿಕ ೧೯೧೬ರಲ್ಲಿ ಹಿಂದು ವಿಶ್ವವಿದ್ಯಾಲಯದ ಸ್ಥಾಪನೆಯ ಸಮಾರಂಭಕ್ಕೆ ಅವರು ಹೋಗಿದ್ದರು. ಅಲ್ಲಿ ಅನೇಕ ರಾಜಾಮಹಾರಾಜರು, ವ್ಹಾಯಿಸರಾಯ್ ಮುಂತಾದ ಅಧಿ ಕಾರಿಗಳು, ಆ್ಯನಿಬೆಝಂಟ ಮುಂತಾದ ಮುಖಂಡರು, ಪಂಡಿತ ಮಾಲವೀಯ ರಂತಹ ಸ್ತ್ರೀ ಇವರೆಲ್ಲರೂ ಕಾಶಿಯಲ್ಲಿ ಒಟ್ಟುಗೂಡಿದ್ದರು. ಆಗ ಎಲ್ಲರೂ ಹಿಂದುಸ್ತಾನಿಯಲ್ಲಿ ಮಾತಾಡದೆ ಇಂಗ್ಲೀಷದಲ್ಲಿ ಮಾತಾಡುವ ಪ್ರಸಂಗಬರು ವದು ಲಾಂಛನಾಸ್ಪದವೆಂದು ನೇರವಾಗಿ ನಿರ್ಭೀತಿಯಿಂದ ನುಡಿದರು. ಎಲ್ಲ ರಿಗೂ ಅದೊಂದು ಬಹಳ ಧಾರಿಷ್ಟ್ಯದ ಕೆಲಸವೆನಿಸಿತು ೧೯೧೬ರಲ್ಲಿ ಒಮ್ಮೆ ಅಧ್ಯಕ್ಷಪದದಲ್ಲಿ ವ್ಹಾಯಿಸರಾಯರಿದ್ದ ಯುದ್ಧವಿಷಯಕ ಸಭೆಯಲ್ಲಿ ಗಾಂಧೀಜಿಯವರು ಹಿಂದುಸ್ತಾನಿಯಲ್ಲಿಯೆ ಮಾತನಾಡಿದರು. ಅಂತಹ ಮಹತ್ವದ ಸಭೆಯಲ್ಲಿ ನಮ್ಮ ಜನರು ಹಿಂದುಸ್ತಾನಿಯಲ್ಲಿ ಮಾತಾಡಿದುದು ಅದೇ ಮೊದಲನೆಯ ಸಲ. ಅನೇಕರು ಆ ಬಗ್ಗೆ ಅವರನ್ನು ಅಭಿನಂದಿಸಿದರು, ಅನೇಕರು ಅತ್ಯಾಶ್ಚರ್ಯವನ್ನು ವ್ಯಕ್ತಮಾಡಿದರು. ಅದು ಇಂಗ್ಲೀಷ ಭಾಷೆಯ ಹಾಗೂ ಬ್ರಿಟಿಶ್ ರಾಜಕರ್ತ್ರರ ಅಪಮಾನವೆಂದು ತಿಳಿದುಕೊಳ್ಳುವ ಮಹಾಮೂರ್ಖರೂ ಹಲವರಿದ್ದರು ಆ ಕಾಲಕ್ಕೆ ಅಗರವಾಲ ಜಾತಿಯವರು ಮಾತ್ರ ಅಲ್ಲಲ್ಲಿ ನಾಗರೀಪ್ರಚಾರಿಣೀಸಭೆಯ ಮುಖಾಂತರ ಹಿಂದಿಯ ಪ್ರಚಾರವನ್ನು ಮಾಡುತ್ತಿದ್ದರು. ೧೯೧೮ರಲ್ಲಿ ಗಾಂಧೀಜಿಯವರು ತಮ್ಮ ಮಗನಾದ ದೇವಿದಾಸನನ್ನು ಮದ್ರಾಸಕ್ಕೆ ಕಳುಹಿ ಅಲ್ಲಿ ದಕ್ಷಿಣಭಾರತ

'ಹಿಂದೀ ಪ್ರಚಾರಸಭೆ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಮುಂದೆ ಅಸಹಕಾರದ ಚಳವಳಿಯ ಕಾಲಕ್ಕೆ ಹಿಂದು ಮುಸಲ್ಮಾನರಲ್ಲಿ ಹಾಗೂ ಉತ್ತರ ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಚಂಡ ಪ್ರಚಾರಕಾರ್ಯವನ್ನು ಕೈಕೊಳ್ಳುವ ಪ್ರಸಂಗವು ಅವರ ಮೇಲೆ ಬಂದಿತು. ಆಗ ಹಿಂದುಸ್ಥಾನಿಯ ಅವಶ್ಯಕತೆಯು ಅವರಿಗೆ ಮತ್ತಷ್ಟು ಪ್ರತೀತವಾಯಿತು ಸಾಗರೋತ್ತರ ಹಿಂದೀಬಾಂಧವರ ಬಗ್ಗೆ ಗಾಂಧೀಜಿಯವರು ಕಾಂಗ್ರೆಸ್ ಅಧಿವೇಶನಗಳಲ್ಲಿ ಮಾತಾಡಿದಾಗೆಲ್ಲ ಅವರು ಬಹುಶಃ ಹಿಂದುಸ್ಥಾನಿಯಲ್ಲಿಯೆ ಮಾತಾಡುತ್ತ ಬಂದಿದ್ದರು. ಇಂಗ್ಲೀಷ ಮಾತಾಡಲೆಬೇಕೆಂದಲ್ಲಿ ಹಿಂದುಸ್ಥಾನಿಯಲ್ಲಿ ಮಾತಾಡುವಂತೆ ಮಾತಾಡಿ ಬಳಿಕ ಆವಶ್ಯವಿದ್ದಷ್ಟು ಇಂಗ್ಲೀಷ ಮಾತನಾಡುತಿದ್ದರು. ಹೀಗೆ ಅವರು ಪ್ರತ್ಯಕ್ಷ ಆಚರಣೆಯ ಮೂಲಕವೆ ಹಿಂದುಸ್ಥಾನಿಯ ಪ್ರಚಾರವನ್ನು ನಡೆಸಿದ್ದರು. ಎಪ್ರಿಲ ೧೯೨೦ರಲ್ಲಿ ಅವರು ಆಲ್ ಇಂಡಿಯಾ ಹೋಮರೂಲ ಲೀಗದ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿದರು. ಆಗ ಅವರು ಕೊಟ್ಟ ಹೇಳಿಕೆ ಯಲ್ಲಿ 'ಭಾಷಾನುಗುಣ ಪ್ರಾಂತರಚನೆ, ಹಾಗೂ ರಾಷ್ಟ್ರಭಾಷೆಯೆಂದು ಹಿಂದುಸ್ಥಾನಿಯ ಸ್ವೀಕಾರ' ಈ ಮಾತುಗಳು ಮುಖ್ಯವಾಗಿರುವವು. ಲೋಕ ಮಾನ್ಯರು ಕೂಡ 'ಭಾಷಾನುಗುಣವಾಗಿ ಪ್ರಾಂತಗಳ ಪುನರ್ವಿಭಜನೆ ಹಾಗೂ ರಾಷ್ಟ್ರಭಾಷೆಯ ಪ್ರಚಾರಾದಿ ಸಾಧನಗಳ ಮೂಲಕ ರಾಷ್ಟ್ರೀಯ ಐಕ್ಯ ಸಾಧನೆ' ಎಂಬ ಉದ್ದೇಶಗಳನ್ನು ಡೆಮಾಕ್ರೇಟಿಕ್ ಸ್ವರಾಜ್ಯಪಕ್ಷದ ಘೋಷಣೆಯಲ್ಲಿ ಸೇರಿಸಿದ್ದರು. ೧೯೨೦ರಲ್ಲಿ ಆದ ನಾಗಪೂರ ಕಾಂಗ್ರೆಸ್ಸಿನ ಘಟನೆ ಮಾರ್ಪಟ್ಟಿತು. ಆಗ ಹಿಂದುಸ್ಥಾನಿ ಇದು ಕಾಂಗ್ರೆಸ್ಸಿನ ಅಧಿಕೃತ ಭಾಷೆ, ದೇಶದ ರಾಷ್ಟ್ರಭಾಷೆ ಆಯಿತು. ಭಾಷಾನುಗುಣ ಕಾಂಗ್ರೆಸ್ ಪ್ರಾಂತ ಗಳಾಗಿ ಪ್ರಾಂತಿಕ ಭಾಷೆಗಳಿಗೂ ಕಾಂಗ್ರೆಸ್ ಘಟನೆಯಲ್ಲಿ ಆಯಾ ಪ್ರಾಂತ ಗಳಲ್ಲಿಯ ಮುಖ್ಯಭಾಷೆಗಳೆಂದು ಸ್ಥಾನವು ದೊರಕಿತು ಮುಂದೆ ಅಸಹಕಾರ ಚಳವಳಿ, ಗಾಂಧೀಜಿಯವರ ಸೆರೆ ಮತ್ತು ಅವರಿಗೆ ಶಿಕ್ಷೆ, ಅವರ ಬಿಡುಗಡೆ ಮುಂತಾದವುಗಳು ನಡೆದವು. ೧೯೨೪ರಲ್ಲಿ ಅವರು ಬೆಳಗಾವಿಯಲ್ಲಿ ನೆರೆದ ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಅಂದಿನಿಂದ ವಿಧಾಯಕ ಕಾರ್ಯದತ್ತ ಅವರು ಹೆಚ್ಚು ಲಕ್ಷ್ಯಗೊಡಹತ್ತಿದರು ೧೯೨೫ರಲ್ಲಿ ಕಾಂಗ್ರೆಸ್ಸು ಹಿಂದುಸ್ಥಾನಿಯ ಪ್ರಚಾರದ ಬಗ್ಗೆ ಒಂದು ಪ್ರತ್ಯೇಕ ಗೊತ್ತುವಳಿ ಮಾಡಿತು. ಪಂಚದಶವಿಧ

ವಿಧಾಯಕ ಕಾರ್ಯಕ್ರಮಗಳಲ್ಲಿ ಅದಕ್ಕೆ ಒಂದು ಪ್ರಮುಖಸ್ಥಾನವು ದೊರಕಿತು ಕಾಂಗ್ರೆಸ್ಸು ಅಧಿಕಾರಾರೂಢವಾಗಿ ೧೯೩೭ರಿಂದ ೧೯೩೯ರ ಕೊನೆಯ ವರೆಗೆ ಎಂಟು ಪ್ರಾಂತಗಳಲ್ಲಿ ಹಿಂದುಸ್ತಾನಿಗೆ ವಿವಿಧ ರೀತಿಯಿಂದ ಉತ್ತೇಜನ ಕೊಟ್ಟಿತು ಅಕ್ಟೋಬರ ೧೯೩೭ರಲ್ಲಿ ಮೂಲಶಿಕ್ಷಣ ಪರಿಷತ್ತು ಗಾಂಧೀಜಿವರ ಅಧ್ಯಕ್ಷತೆಯಲ್ಲಿ ಕೂಡಿತು. ಅದರ ಕಾರ್ಯಕಲಾಪಗಳು ಹಿಂದುಸ್ತಾನಿಯಲ್ಲಿಯೆ ನಡೆಯುತಕ್ಕದ್ದೆಂದು ಗಾಂಧಿಜೀಯರು ಪ್ರಥಮದಲ್ಲಿಯೆ ಹೇಳಿಬಿಟ್ಟರು ಮೂಲ ಶಿಕ್ಷಣದ ಅಭ್ಯಾಸಕ್ರಮದಲ್ಲಿ ಮಾತೃಭಾಷೆಗೆ ಪ್ರಧಾನ ಸ್ಥಾನವು ಕೊಡಲಾಗಿದ್ದು ಅದೇ ಬೋಧಭಾಷೆಯಾಗಬೇಕು ಎಂಬ ನಿರ್ಬಂಧ ವಿರುವದು ಅದೇ ಕಾಲಕ್ಕೆ, ಐದನೆ ಹಾಗೂ ಆರನೆ ಈಯತ್ತೆಯಲ್ಲಿರುವಾಗ ಅಂದರೆ ವಿದ್ಯಾರ್ಥಿಯ ೧೨ನೆ ವರುಷ ಅವನಿಗೆ ಹಿಂದುಸ್ತಾನಿಯ ಪರಿಚಯವಾಗಬೇಕೆಂದು ಹೇಳಲಾಗಿರುವದು. ಇದು ರಾಷ್ಟ್ರಭಾಷೆ, ಹಿಂದೂ ಮುಸಲ್ಮಾನರಿಬ್ಬರೂ ಕೂಡಿ ರೂಪುಗೊಳಿಸಿದ ಭಾಷೆ ಎಂಬ ಮಾತನ್ನು ವಿದ್ಯಾರ್ಥಿಗಳಿಗೆ ವಿಶೇಷವಾಗಿ ಹೇಳಬೇಕೆಂದು ಸೂಚಿಸಲಾಗುವದು ಮುಂದೆ ೧೯೩೮ರಲ್ಲಿ ಕಾಂಗ್ರೆಸ್ಸು ಈ ಮೂಲ ಶಿಕ್ಷಣ ಯೋಜನೆಗೆ ಪೂರ್ಣ ಸಮ್ಮತಿ ಕೊಟ್ಟು ಪರ್ಯಾಯದಿಂದ ಹಿಂದುಸ್ತಾನಿಯ ಪ್ರಸಾರಕ್ಕೆ ಪೂರ್ಣ ಬೆಂಬಲ ಕೊಟ್ಟಿತು. ಈ ಚಳವಳಿಯು ಈಗ ವಿರಾಟ ಸ್ವರೂಪವನ್ನು ತಾಳಿತು ಕಾಂಗ್ರೆಸ್ಸಿನ ಅಧಿವೇಶನಗಳಲ್ಲಿ ಈಚೆಗೆ ಹಿಂದುಸ್ತಾನಿಯು ಹೊರತು ಅನ್ಯಭಾಷೆ ಕ್ವಚಿತವೆ ಕೇಳಿಸುವದು. ಕಾಂಗ್ರೆಸ್ ಕಾರ್ಯಕರ್ತರಲ್ಲಿ ಹಿಂದುಸ್ಥಾನಿ ಅಭ್ಯಾಸ ಮಾಡದೆ ಇರುವವರು ಕ್ವಚಿತ. ಈಗ ಬಹುವಿಧದಿಂದ ಬಹುಮುಖದಿಂದ ಅನೇಕ ಶಿಕ್ಷಣ ಸಂಸ್ಥೆಗಳ ಮುಖಾಂತರ ಹಾಗೂ ಅನ್ಯ ಹಿಂದುಸ್ತಾನಿ ಪ್ರೇಮೀ ಮಂಡಳಗಳಿಂದ ದೇಶದಲ್ಲಿ ಹಿಂದುಸ್ತಾನಿ ಪ್ರಸಾರವು ಅದರೊಡನೆ ರಾಷ್ಟ್ರೀಯ ಭಾವನೆ, ಏಕರಾಷ್ಟ್ರೀಯತ್ವದ ಜಾಗ್ರತಿ, ನಮ್ಮ ಸಂಸ್ಕೃತಿ ಪರಂಪರೆಗಳ ಎಚ್ಚರ ಇವು ಅನಾಯಾಸವಾಗಿ ಬಹಳ ದೊಡ್ಡ ಪ್ರಮಾಣದಿಂದ ನಡೆದಿವೆ.

## ಪ್ರಚಾರ ಮತ್ತು ಪ್ರಚಾರ-ಸಂಸ್ಥೆಗಳು

ಪ್ರಾಂತಗಳಲ್ಲಿಯ ಪ್ರಾಂತಿಕ ಭಾಷೆಗಳತ್ತ ಆತ್ಯಂತಿಕ ಲಕ್ಷವು ಪೂರೈಸಲಾಗಬೇಕು ಎಂಬ ಮಾತು ನಿರ್ವಿವಾದವು. ಅದೇ ಕಾಲಕ್ಕೆ ಹಿಂದುಸ್ತಾನಿ

ಪ್ರಚಾರದತ್ತ ದುರ್ಲಕ್ಷ ಮಾಡಿ ನಡೆಯಲಾರದು. ಇಂಗ್ಲೀಷ ಸಾಮಾನ್ಯ ಭಾಷೆಯಾಗಬಲ್ಲದು ಎಂಬ ಭ್ರಮ ಇನ್ನು ಯಾರಿಗಾದರೂ ಇದ್ದರೆ ಅವರು ದುರಾರಾಧ್ಯರೆಂದೇ ಹೇಳಬಹುದು. ಬ್ರಿಟಿಷ ಸರಕಾರದವರೇ ಕುಳಿತು ತಮ್ಮ ಸಾಮ್ರಾಜ್ಯವಾದೀ ಮನೋರಚನೆಗನುಗುಣವಾಗಿ ಅದರ ಪ್ರಸಾರವನ್ನು ಈಗ ೧೫೦ ವರುಷ ಮಾಡುತ್ತಿದ್ದರೂ ಸಾವಿರದಲ್ಲಿ ಹನ್ನೆರಡು ಹದಿಮೂರು ಜನರಿಗೆ ಮಾತ್ರ ಹರಕು ಮುರುಕು ಇಂಗ್ಲೀಷು ಈಗ ಬರುತಿರುವದು. ಮೇಲಾಗಿ ಬ್ರಿಟಿಶ ಸಾಮ್ರಾಜ್ಯವು ಇಲ್ಲಿ ಶಾಶ್ವತವಲ್ಲ ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಕೊಡುವದೆ ಬ್ರಿಟಿಶರ ಸ್ವೀಕೃತವಾದ ಧ್ಯೇಯವಿರುವದೆಂದು ಅವರೇ ಸಾರಿರುವರು. ಅಂದ ಬಳಿಕ ಇಂಗ್ಲಿಷವು ದಿನೇ ದಿನೇ ಸ್ಥಾನಭ್ರಷ್ಟ ವಾಗದೆ ಗತಿಯಿಲ್ಲ. ಅದರ ರಾಷ್ಟ್ರವ್ಯಾಪಕ ಸ್ಥಾನವನ್ನು ಹಿಂದುಸ್ಥಾನಿಯೆ ಪಡೆಯಬಲ್ಲದು. ಆದುದರಿಂದ ಯಾವ ಪ್ರಾಂತವು ಈಗ ಹಿಂದುಸ್ತಾನಿಯ ಪ್ರಚಾರದಲ್ಲಿ ಹಿಂದುಳಿಯುವದೊ ಅದಕ್ಕೆ ಮುಂದರಿಯಲು ಅಡ್ಡಿಯಾಗುವದು. ಮೊದಲನೆಯ ಮಾತೆಂದರೆ, ಆಯಾ ಪ್ರಾಂತಿಕ ಭಾಷೆ ಸಾಕಷ್ಟು ಬರದೆ ಇರುವವನಿಗೆ ಅಂದರೆ ಕನಿಷ್ಟ ನಾಲ್ಕನೆ ಪುಸ್ತಕ ಓದಿ ತಿಳಿದುಕೊಳ್ಳುವಷ್ಟು ಜ್ಞಾನವಿಲ್ಲದವನಿಗೆ ಹಿಂದುಸ್ತಾನಿ ಕಲಿಸಬಾರದು ಹಂಗಾಮಿ ಹಿಂದುಸ್ತಾನಿ ಪರಿಕ್ಷೆಗಳೊಡನೆ ಆಯಾ ಪ್ರಾಂತಕ ಭಾಷೆಯ ಪರೀಕ್ಷಾ ಕಾಗದವೂ ಒಂದು ಅವಶ್ಯವಿರಬೇಕು ಶಾಲೆ ಅಥವಾ ಶೈಕ್ಷಣಿಕ ಸಂಸ್ಥೆಗಳ ಮುಖಾಂತರ ಹಿಂದುಸ್ತಾನಿಯ ಪ್ರಚಾರವು ನಡೆಯಬೇಕಾದರೆ ಸಾಮಾನ್ಯವಾಗಿ ವಿದ್ಯಾರ್ಥಿಗಳು ೧೨ ವರುಷದವರಾದ ಮೇಲೆ ಅವರಿಗೆ ಹಿಂದುಸ್ಥಾನಿಯ ಸಂಸ್ಕಾರ ಮಾಡಲು ಅಡ್ಡಿ ಇಲ್ಲ, ಅಂದರೆ ಪ್ರಾಥಮಿ. ಶಾಲೆಗಳ ಅಂತ್ಯವರ್ಗಗಳಲ್ಲಿ ಹಾಗೂ ಮಾಧ್ಯಮಿಕ ಶಾಲೆಗಳ ಪ್ರಾಥಮಿಕ ವರ್ಗಗಳಲ್ಲಿ ಹಿಂದುಸ್ತಾನಿಯ ಸಾಮಾನ್ಯ ಪರಿಚಯವನ್ನು ಅವರಿಗೆ ಮಾಡಿಕೊಡಬೇಕು. ಮಾಧ್ಯಮಿಕ ಶಾಲೆಗಳ ಉಚ್ಚ ವರ್ಗಗಳಲ್ಲಿ ಅದನ್ನು ಐಚ್ಛಿಕ ದ್ವಿತೀಯ ಭಾಷೆ ಇಡಬಹುದು. ಉಚ್ಚ ಶಿಕ್ಷಣದ ವರ್ಗಗಳಲ್ಲಿ ಅಂದರೆ ವಯಸ್ಸಿನ ೧೬ ಮೀರಿದ ಬಳಿಕ ಕಡ್ಡಾಯವಾಗಿ ದ್ವಿತೀಯ ಭಾಷೆಯೆಂದು ಅವರಿಗೆ ಹಿಂದುಸ್ತಾನಿ ಕಲಿಸಬೇಕು. ಅದರ ಮಟ್ಟು ಸಾಧಾರಣ ಈಗಿನ ಮ್ಯಾಟ್ರಿಕ್ ವಿದ್ಯಾರ್ಥಿಗೆ ಬರುವ ಕನ್ನಡದಷ್ಟು ಇರಬೇಕು. ತಾನಾಗಿ ಮುಂದೆ ಅಭ್ಯಸಿಸಿ ಅವಶ್ಯವಿದ್ದರೆ ಬೆಳೆ

ಸುವಷ್ಟು ಜ್ಞಾನವು ವಿದ್ಯಾರ್ಥಿಗೆ ಆಗಬೇಕು. ಹಿಂದುಸ್ತಾನಿ ಮಾತೃಭಾಷೆ ಇದ್ದವರು ಅನ್ಯ ಪ್ರಾಂತಗಳಲ್ಲಿರುತ್ತಿದ್ದರೆ ಅವರು ಆಯಾ ಪ್ರಾಂತಿಕ ಭಾಷೆಗಳನ್ನು ಕಲಿಯಲೇ ಬೇಕು. ಇದಲ್ಲದೆ ಐಚ್ಛಿಕವಾಗಿ ಹಿಂದುಸ್ತಾನಿ ಕಲಿಯುವವರಿಗಾಗಿ ಹಂಗಾಮಿ ವರ್ಗಗಳು, ಪರೀಕ್ಷೆಗಳು, ಸ್ಪರ್ಧೆಗಳು ಹಿಂದುಸ್ತಾನಿ ಪ್ರೇಮೀ ಮಂಡಲಗಳಿಂದ ನಡೆಸಲ್ಪಡಬೇಕು ಸುಲಭ ಹಿಂದುಸ್ತಾನಿ ಪುಸ್ತಕಗಳು, ಮಾಸಿಕಗಳು ಇತ್ಯಾದಿಗಳ ಪ್ರಸಾರವು ನಡೆಯಬೇಕು. ಅವುಗಳಲ್ಲಿ ಅಖಿಲ ಭಾರತೀಯ ದೃಷ್ಟಿಯಿಂದ ಅವಶ್ಯವಿರುವ ವಿಷಯಗಳ ಚರ್ಚೆ, ತೇಜಸ್ವಿ ರಾಷ್ಟ್ರೀಯತೆ ಉದ್ದೀಪನಗೊಳ್ಳುವಂಥ ವಿಚಾರಗಳು, ಮುಂತಾದವುಗಳು ಇರಬೇಕು. ಇದಲ್ಲದೆ ಚಲಚ್ಚಿತ್ರ, ರೇಡಿಯೊ ಮುಂತಾದವುಗಳ ಮುಖಾಂತರವೂ ಹಿಂದುಸ್ತಾನಿಯ ಪ್ರಚಾರವು ನಡೆದಿದೆ ಆ ಹಿಂದುಸ್ತಾನಿ ಭಾಷೆ ಸರಿಯಾಗಿರುವಂತೆ, ಅದೇ ರೀತಿ ಆಯಾ ವಿಷಯ ಮತ್ತು ಮಂಡನ ಪದ್ಧತಿ ಆರೋಗ್ಯಕರರವಾದುದೂ ಜೀವನ ವಿಕಾಸಕ್ಕೆ ಪೋಷಕವಾದುದೂ ಇರುವದೊ ಇಲ್ಲವೊ ಇದನ್ನು ನೋಡಿಕೊಳ್ಳಲಿಕ್ಕೆ ಬೇಕು.

ಪ್ರಚಾರ ಸಂಸ್ಥೆಗಳ ವಿಶೇಷ ಮಾಹಿತಿಯನ್ನು ಇಲ್ಲಿ ಕೊಡುವದು ಸಾಧ್ಯವಿಲ್ಲ. ಹಿಂದೀ ಭಾಷಾ ಪ್ರಾಂತಗಳಲ್ಲಿ, ಅಹಿಂದೀ ಪ್ರಾಂತಗಳಲ್ಲಿ, ದ್ರಾವಿಡ ಭಾಷಾ ಪ್ರಾಂತಗಳಲ್ಲಿ ಹೀಗೆ ಮೂರು ಕಡೆಗೆ ಬೇರೆ ಬೇರೆ ರೀತಿ ಪ್ರಚಾರ ನಡೆದಿದೆ ಹಾಗೂ ಪ್ರಚಾರ ಸಂಸ್ಥೆಗಳಿವೆ ಶುದ್ಧ ಹಿಂದೀ ಅಂದರೆ ಸಂಸ್ಕೃತ ಪ್ರಧಾನ ಹಿಂದುಸ್ತಾನಿ ಹಾಗೂ ಶುದ್ಧ ಊರ್ದು ಅಂದರೆ ಫಾರಸಿ ಅರಬೀ ಪ್ರಧಾನ ಹಿಂದುಸ್ತಾನಿ ಇವುಗಳ ಪ್ರಚಾರ ಮಾಡುವವರು ಕೂಡ ಪರ್ಯಾಯದಿಂದ ಹಿಂದುಸ್ತಾನಿಯ ಪ್ರಚಾರವನ್ನು ಮಾಡುತ್ತಿರುವರು. ಯಾಕಂದರೆ ಅವರ ಭಾಷೆಯ ಆಸ್ತಿವಾರ, ನರನಾಡಿಗಳು, ಹಿಂದುಸ್ತಾನಿಯೆ ಇರುವವು ಆದರೆ ಆ ಪ್ರಚಾರವು ಹಿಂದು ಮುಸಲ್ಮಾನ ಎಂಬ ಜಾತೀಯ ವಿರೋಧ ಭಾವನೆಯ ಮೂಲಕ ಮತ್ತು ಆ ಅಭಿನಿವೇಶದಿಂದ ನಡೆಯುತಿರುದರಿಂದ ಅದು ಇಷ್ಟವಾದುದಿಲ್ಲ. ಆದರೆ ಅದಕ್ಕುಪಾಯವಿಲ್ಲ. ಆ ಬಗೆಯ ದೊಡ್ಡ ಪ್ರಚಾರ ಸಂಸ್ಥೆಗಳೆಂದರೆ ಒಂದತ್ತ ಹಿಂದೀ ಸಾಹಿತ್ಯ ಸಮ್ಮೇಲನ, ಇನ್ನೊಂದತ್ತ ಅಂಜುಮನ್ ತರಕ್ಕೀ ಊರ್ದು. ಇಲ್ಲಿ ನಾವು ದ್ರಾವಿಡ

ಭಾಷಾ ಪ್ರಾಂತಗಳಲ್ಲಿ ಇದ್ದ ಪ್ರಚಾರಸಂಸ್ಥೆಗಳನ್ನು ಕುರಿತು ಮಾತ್ರ ಎರಡು ಶಬ್ದಗಳನ್ನು ಬರೆಯುವೆವು.

ಮದ್ರಾಸದಲ್ಲಿ ೧೯೧೮ರಲ್ಲಿ ಸ್ಥಾಪನವಾದ 'ದಕ್ಷಿಣ ಭಾರತ ಹಿಂದೀ (ಹಿಂದುಸ್ತಾನಿ) ಪ್ರಚಾರ ಸಭೆ' ಗೆ ೧೯೪೩ ರಲ್ಲಿ ಇಪ್ಪತ್ತೈದು ವರುಷಗಳಾದವು. ಆ ಪ್ರಸಂಗದಲ್ಲಿ ಅವರು ಹೊರಡಿಸಿದ ವರದಿಯ ಮೇರೆಗೆ ಆ ಸಭೆಯ ಐದು ಶಾಖೆಗಳಿವೆ. ತಾಮಿಳನಾಡು, ಆಂಧ್ರ, ಕರ್ನಾಟಕ, ಕೇರಳ ಹೀಗೆ ೪ ಪ್ರಾಂತಗಳಲ್ಲಿ ೪, ಒಂದು ಮದ್ರಾಸ ಪಟ್ಟಣದಲ್ಲಿ. ಆ ಸಭೆಯು ೨೫ ವರ್ಷಗಳಲ್ಲಿ ೧೩,೬೧,೦೬೦ ರೂಪಾಯಿ ವೆಚ್ಚ ಮಾಡಿದೆ, ೭೦೦೦೦ ರೂಪಾಯಿಯ ಕಟ್ಟಡಗಳನ್ನು ಕಟ್ಟಿದೆ, ೧೫೦ ಪುಸ್ತಕಗಳನ್ನು ಪ್ರಕಟಿಸಿದೆ, ಅದರಿಂದ ೧೪೩೬ ಸ್ನಾತಕರು (ಗ್ರ್ಯಾಜ್ಯುಯೇಟರು) ಹೊರಬಿದ್ದಿದ್ದಾರೆ. ೪೦೦ ಶಾಲೆಗಳಲ್ಲಿ ಹಿಂದುಸ್ತಾನಿ ಕಲಿಸಲಾಗುತ್ತಿದೆ, ೧೪೨೫ ಪ್ರಚಾರಕರಿದ್ದಾರೆ, ೨೫೦೦ ಪ್ರಚಾರ ಕೇಂದ್ರಗಳಿವೆ, ೮೦೦ ಪರೀಕ್ಷಾ ಕೇಂದ್ರಗಳಿವೆ, ಈವರೆಗೆ ೧,೭೨,೦೦೬ ಜನ ಪರೀಕ್ಷೆಗೆ ಕುಳಿತಿದ್ದಾರೆ. ಕರ್ನಾಟಕದ ಮುಖ್ಯ ಕಚೇರಿ ಧಾರವಾಡದಲ್ಲಿದ್ದು ಮೈಸೂರ ರಿಯಾಸತ ಹಿಂದೀ ಪ್ರಚಾರ ಸಭೆಯ ಕಚೇರಿಯು ಬೆಂಗಳೂರಲ್ಲಿರುವದು. ಕರ್ನಾಟಕದಲ್ಲಿ ಸುಮಾರು ೧೦೨ ಶಾಲೆಗಳಲ್ಲಿ ಈಗ ಹಿಂದೀ ಕಲಿಸಲಾಗುತಿದೆ; ಹಾಗೂ ೩೨೦ ಪ್ರಚಾರಕರು ಕಾರ್ಯ ಮಾಡುತ್ತಿದ್ದಾರೆ. ವರುಷಕ್ಕೆ ಸಾಧಾರಣವಾಗಿ ೩೦೦೦ ಜನರು ಪರೀಕ್ಷೆಗೆ ಕೂಡುತ್ತಾರೆ. ಈ ಬಗೆಯಾಗಿ ವಿವಿಧ ಸಂಸ್ಥೆ ಸಂಘಗಳಲ್ಲದೆ ಹಿಂದುಸ್ತಾನಿಯ ಪ್ರೇಮವಿದ್ದವರು ಬೇರೆ ಬೇರೆ ಮಂಡಲಗಳ ಮುಖಾಂತರ ಪ್ರಚಾರ ಕೆಲಸವನ್ನು ನಡೆಸಿರುವರು.

## ಹಲವು ವಾದಗಳು

ಈ ವರೆಗಿನ ಸಾಂಗೋಪಾಂಗ ವಿಚಾರದ ನಂತರ ಈ ಬಗ್ಗೆ ಪ್ರಚಲಿತವಿರುವ ಹಲವು ವಾದಗಳ ದಿಗ್ದರ್ಶನವನ್ನು ಇಲ್ಲಿ ಮಾಡುವದು ಅನುಚಿತವಾಗಲಾರದು. ಆ ವಾದಗಳ ಪೂರ್ಣ ಚರ್ಚೆ ಇಲ್ಲವೆ ಎಲ್ಲ ಸಾಧಕಬಾಧಕ ಪ್ರಮಾಣ ಇವುಗಳನ್ನು ಇಲ್ಲಿ ಕೊಡುವದಸಾಧ್ಯ. ಆದರೆ ಸಾಮಾನ್ಯ ವಾಚಕರಿಗೆ ಅವುಗಳ ಜ್ಞಾನವಿರದಿರುವದು ಅಶಕ್ಯವ್ಯವಿರುವದು. ಆದುದರಿಂದ ಸಂಕ್ಷೇಪ

ದಿಂದ ಆ ವಾದಗಳ ಸ್ವರೂಪವನ್ನು ಇಲ್ಲಿ ಕೊಟ್ಟು ಅವುಗಳ ಬಗ್ಗೆ ಕಾಂಗ್ರೆಸ್ಸಿನ ದೃಷ್ಟಿ ಯಾವದಿರಬಲ್ಲದು ಎಂಬುದನ್ನು ಇಲ್ಲಿ ಸೂಚಿಸಲಾಗಿದೆ

ಇಂಗ್ಲೀಷ ಭಾಷೆಯನ್ನೆ ರಾಷ್ಟ್ರಭಾಷೆಮಾಡಬೇಕು ಎಂದು ಹಲವರು ಬಹಳ ಕಳಕಳಿಯಿಂದ ಹೇಳಿರುವರು ಅವರ ಬಗ್ಗೆ ತಮ್ಮ ಪೂರ್ಣ ಸಹಾನುಭೂತಿ ಇದೆ. ಆ ಭಾಷೆಯ ಮಹತ್ವ, ಸಾಮರ್ಥ್ಯ, ಸೌಂದರ್ಯ ಇವುಗಳ ಬಗ್ಗೆ ಭಿನ್ನಮತವಿರಲಾರದು. ಆದರೂ ಅದನ್ನು ರಾಷ್ಟ್ರಭಾಷೆ ಮಾಡುವದು ಸಾಧ್ಯವಿಲ್ಲ. ಆ ಬಗ್ಗೆ ಈಗಾಗಲೆ ಹಲವು ಕಾರಣಗಳನ್ನು ನಾವು ಅಲ್ಲಲ್ಲಿ ಕೊಟ್ಟಿದ್ದೇವೆ. ಇಂಗ್ಲೀಷದ ಸಂಪರ್ಕವೆಂದರೆ ದೈವೀ ಅನುಗ್ರಹ, ಇಂಗ್ಲೀಷಭಾಷೆಯ ಅಭ್ಯಾಸದಿಂದಲೆ ನಮಗೆ ಸ್ವರಾಜ್ಯ-ಸ್ವಾತಂತ್ರ್ಯಾದಿ ಕಲ್ಪನೆಗಳು ಬಂದವು. ಇಂಗ್ಲೀಷರ ರಾಜ್ಯದಿಂದಲೆ ನಮ್ಮಲ್ಲಿ ಭೌತಿಕ ಸುಧಾರಣೆಗಳುಂಟಾದವು ಇಲ್ಲದಿದ್ದರೆ ನಾವು ಕಾಡುಸ್ಥಿತಿಯಲ್ಲಿರುತಿದ್ದೆವು ಎಂದು ತಿಳಿಯುವವರು ಮತ್ತು ಹೇಳುವವರು ಇನ್ನೂ ಹಲವರು ಇರುವರು. ಆದರೆ ಇವರೆಲ್ಲ ಭ್ರಮವಾದಿಗಳು, ಚೀನ, ಜಪಾನ, ರಶಿಯಾ ಮುಂತಾದ ರಾಷ್ಟ್ರಗಳಿಗೇನೂ ಬ್ರಿಟಿಶರ ಕರಿಗಾಲು ಹತ್ತಲಿಲ್ಲ. ಅವರೇನೂ ಇಂಗ್ಲೀಷ ಮುಖಾಂತರ ತಮ್ಮ ಸ್ವಾತಂತ್ರ್ಯದ ಪಾಠಗಳನ್ನು ಕಲಿಯಲಿಲ್ಲ ಅವರೇನೂ ಪರರಾಷ್ಟ್ರಕ್ಕೆ ಗುಲಾಮರಾಗಿಯೆ ಸುಧಾರಣೆಯ ಮಾರ್ಗವನ್ನು ಹಿಡಿಯಲಿಲ್ಲ. ಆ ರಾಷ್ಟ್ರಗಳು ತಮ್ಮ ತಮ್ಮ ಪರಿಯಿಂದ ತಮ್ಮ ಭಾಷೆಗಳ ಮೂಲಕವೆ ಅತ್ಯುಚ್ಚ ವಿಚಾರಶಿಖರವನ್ನು ಮುಟ್ಟಿ, ಸ್ವತಂತ್ರವಿದ್ದೇ ಪ್ರಗತಿಯನ್ನು ಸಾಧಿಸಿವೆ. ಹಿಂದುಸ್ತಾನವೂ ಹಾಗೆ ಮಾಡಲು ಸಾಧ್ಯವಿರಲಿಲ್ಲ ಎಂದು ಹೇಳಲಿಕ್ಕಾಗದು. ಇಂಗ್ಲೀಷಿನ ದಾಸ್ಯ ಹಾಗೂ ಇಂಗ್ಲೀಷರ ದಾಸ್ಯ ಇವೆರಡೂ ಕಾರಣಾಂತರಗಳಿಂದ ನಮಗೆ ಒದಗಿದ್ದರೂ ಅವು ನಮ್ಮ ಹಿತಕ್ಕಾಗಿ ಎಂದು ಪ್ರತಿಪಾದಿಸುವುದೆಂದರೆ ಶೃಂಖಲೆಗಳು ಅಲಂಕಾರಗಳೆಂದು, ಮನೆ ಸೇರಿದ ಘಟಸರ್ಪವು ಶುಭಕಾರಕವೆಂದು ವಾದಿಸಿದಂತೆಯೆ ಸೈ. ಇಂಗ್ಲೀಷನ್ನು ಅಥವಾ ಇಂಗ್ಲೀಷರನ್ನು ನಾವು ದ್ವೇಷಿಸಬೇಕೆಂದು ಇದರ ಅರ್ಥವಲ್ಲ ಆದರೆ ಅವರು ಸಾಮ್ರಾಜ್ಯವಾದಿಗಳಾಗಿ, ಯಾವದೇ ಬಗೆಯ ಶೋಷಕರಾಗಿ ಇಲ್ಲಿರುವದು ಬೇಡ. ಅಲ್ಲಿಯ ವರೆಗೆ ಅವರ ಯಾವ ಸಂಬಂಧವೂ ನಮಗೆ

ಇಷ್ಟವಿಲ್ಲ. ಆ ಅನಿಷ್ಟವೃತ್ತಿಯನ್ನು ಅವರು ಬಿಟ್ಟ ಕ್ಷಣವೆ ಅವರು ನಮ್ಮ ಮಿತ್ರರು, ಅಲ್ಲಿಯ ವರೆಗೆ ಪರಮ ಹಿತಶತ್ರುಗಳು. ಅವರ ಭಾಷೆಯಿಂದಲೂ ನಾವು ಲಾಭ ಪಡೆಯುವ. ಆದರೆ ಅದನ್ನು ರಾಷ್ಟ್ರಭಾಷೆ ಮಾಡಿ ಅಲ್ಲ. ಅದರಲ್ಲಿಯ ಸರ್ವೋತ್ಕೃಷ್ಟ ಗ್ರಂಥಗಳನ್ನು ಭಾಷಾಂತರಿಸಿ, ಅದರಲ್ಲಿಯ ಉಚ್ಚ ವೀರವತ್ತರವಾದ ವಿಚಾರಗಳನ್ನು ಆತ್ಮಸಾತ್‌ಮಾಡಿಕೊಂಡು ಲಾಭಪಡೆಯುವ. ಅದನ್ನು ಬೋಧಭಾಷೆ ಮಾಡಿ ಅಲ್ಲ, ಅದನ್ನು ಅಂತರಾಷ್ಟ್ರೀಯ ವ್ಯವಹಾರಕ್ಕಾಗಿ, ವಿಜ್ಞಾನಾದಿಗಳ ಅಭ್ಯಾಸಕ್ಕಾಗಿ ಮೀಸಲಾಗಿಟ್ಟು ಅದರಿಂದ ಪ್ರಯೋಜನ ಪಡೆಯುವ.

ಪ್ರಾಂತಭಾಷೆ, ರಾಷ್ಟ್ರಭಾಷೆ ಇವುಗಳ ನಡುವೆ ಹಲವೆಡೆಗೆ ವಿರೋಧವು ಕಂಡುಬರುವದು. ರಾಷ್ಟ್ರಭಾಷೆಯು ಪ್ರಚಾರದಿಂದ ಪ್ರಾಂತಭಾಷೆಗೆ ಪೆಟ್ಟು ಬೀಳುವದು, ಮೊದಲು ಪ್ರಾಂತಭಾಷೆ ಬಳಿಕ ರಾಷ್ಟ್ರಭಾಷೆಯ ವಿಷಯವನ್ನು ವಿಚಾರಿಸುವ, ರಾಷ್ಟ್ರಭಾಷೆ ನಮಗೇಕೆ ಇತ್ಯಾದಿ ಚರ್ಚೆ ಎಷ್ಟೋ ಸಾರೆ ಏಳುವದು. ಇವೆರಡೂ ತಮ್ಮ ಮರ್ಯಾದೆ ಹಾಗೂ ಕಾರ್ಯಕ್ಷೇತ್ರಗಳನ್ನು ಕಾಯ್ದುಕೊಂಡಿದ್ದರೆ ಎರಡೂ ಪರಸ್ಪರ ಪೋಷಕವೆ ಆಗಬಲ್ಲವು. ಪ್ರಾಂತಭಾಷೆಗೆ ಪ್ರಥಮಸ್ಥಾನ, ಮುಖ್ಯಮಾನ ಎಂಬಲ್ಲಿ ಸಂಶಯವೆ ಇಲ್ಲ. ರಾಷ್ಟ್ರಭಾಷಾಪ್ರಚಾರಕರು ಈ ಮಾತನ್ನು ಲಕ್ಷದಲ್ಲಿಟ್ಟುಕೊಂಡು ಪ್ರಾಂತಭಾಷೆಯ ಬಗ್ಗೆ ಚನ್ನಾಗಿ ಆಸ್ಥೆಯನ್ನುವಹಿಸಲಿಕ್ಕೆಬೇಕು. ಪ್ರಾಂತಭಾಷೆಯತ್ತ ದುರ್ಲಕ್ಷಮಾಡಿ ರಾಷ್ಟ್ರಭಾಷೆ ಬೆಳೆಸಬೇಕೆನ್ನುವವರು ಉಸುಬಿನ ತಳಹದಿಯ ಮೇಲೆ ಕಟ್ಟಡ ಕಟ್ಟುತಿರುವರು. ರಾಷ್ಟ್ರಭಾಷೆ ತಮ್ಮತಾಯಿ, ಪ್ರಾಂತಭಾಷೆ ಮಲತಾಯಿ ಎಂದು ಅವರು ತಿಯಕೂಡದು. ಅದೇರೀತಿ ಪ್ರಾಂತಭಾಷಾಭಿಮಾನಿಗಳೂ ರಾಷ್ಟ್ರಭಾಷೆಯ ಬಗ್ಗೆ ಮಾತೃಭಾವವನ್ನಿಟ್ಟುಕೊಳ್ಳಲಿಕ್ಕೆಬೇಕು. ಒಬ್ಬಳು ತಾಯಿಯಾದರೆ ಇನ್ನೊಬ್ಬಳು ಚಿಗವ್ವ ಎಂಬ ಭಾವನೆಯಿಂದ ಇಬ್ಬರೂ ನಡಕೊಳ್ಳಬೇಕು. ನಾವಿಬ್ಬರೂ ಪರಕೀಯವಾದ ಇಂಗ್ಲೀಷ ಭಾಷೆಯ ದಾಸ್ಯದಿಂದ ಮುಕ್ತವಾಗಬೇಕಾಗಿದೆ ಎಂಬುದುರೇ ಮಕೂಡದು ಹಿಂದುಸ್ತಾನವೆಂದರೊಂದು ಮೂರನೆ ವರ್ಗದ ರೆಲ್ವೆನ್ನುಬ್ಬಿಯು ಅದರಲ್ಲಿ ಇಂಗ್ಲಿಷ ಟಿಕೀಟಿಲ್ಲದೆ ಬಂದು ಬಲಾತ್ಕಾರದಿಂದ ಇಡೀ

ಒಂದು ಚಾಕು ಹಿಡಿದುಕೊಂಡು ಮಲಗಿಬಿಟ್ಟಿದೆ. ನಾವಿಬ್ಬರೂ ಪ್ರಾಂತ ಭಾಷೆಗಳು ಹಾಗೂ ರಾಷ್ಟ್ರಭಾಷೆಗಳು ತಿಕೀಟು ಇದ್ದರೂ ಕೂಡಲು ಸ್ಥಳ ವಿಲ್ಲದೆ ಗೇಣು ಚೋಟು ಜಾಗೆಗಾಗಿ ಪರಸ್ಪರ ಹೊಡೆದಾಡುತ್ತಿದ್ದೇವೆ. ಇಂಗ್ಲೀಷನ್ನು ಚನ್ನಾಗಿ ಅಲ್ಲಾಡಿಸಿ ಎಬ್ಬಿಸಿ ತಿಕೀಟಿಲ್ಲದ್ದಕ್ಕಾಗಿ ಕೆಳಗಿಳಿಸಿಬಿಡುವೆವೆಂಬ ಭಯಹಾಕಿ ಸರಿಯಾಗಿ ಕೂಡಿಸಿದರೆ ಇಬ್ಬರಿಗೂ ಇಂಬಾಗಿ ಕೂಡಲು ದೊರೆಯುವದು. ಹಿಂದೂ ಮುಸಲ್ಮಾನರಿಬ್ಬರ ಡುಬ್ಬದ ಮೇಲೂ ಬ್ರಿಟಿಶರು ಇನ್ನೂ ಥಡಿ ಬಿಗಿದು ಲಗಾಮು ಹಿಡಿದು ಕುಳಿತಿರುವಾಗ ಹಿಂದೂಸಭೆ, ಮುಸ್ಲಿಮ್ ಲೀಗದವರು ಪಾಕಿಸ್ತಾನ, ಹಿಂದುಸ್ತಾನ ಎಂದು ಬಡಿದಾಡಿದಂತೆ ಈ ಬಡಿದಾಟವಿದೆ. ಇದು ಪರಕೀಯರಿಗೆ ಅನುಕೂಲವೆ. ಸಾವಿರಾರು ವರುಷಗಳಿಂದ ತನ್ನ ಸ್ಥಾನಮಾನಗಳನ್ನು ಕಾಯ್ದುಕೊಂಡು ಕಾಲೂರಿನಿಂತ ಪ್ರಾಂತಭಾಷೆಗಳನ್ನು ಕದಲಿಸುವವರಾರು ಎಂಬ ಆತ್ಮವಿಶ್ವಾಸದಿಂದಲೂ ಯಾವದೆ ಸಂಶಯ ಪಿಶಾಚಿಗ ಒಳಗಾಗದೆಯೂ ಪ್ರಾಂತಭಾಷಾ ಭಾಷಿಗಳು ಸಾಗಬೇಕು. ರಾಷ್ಟ್ರಭಾಷಾ ಪ್ರಚಾರಕರು ತಮ್ಮ ನವೋತ್ಸಾಹದ ಅತಿರೇಕದಿಂದ ತಾಳತಪ್ಪಿ ನಡೆಯದೆ ಪ್ರಾಂತಭಾಷೆಯ ಉದ್ಧಾರವೇ ರಾಷ್ಟ್ರಭಾಷೆಯ ಪ್ರಚಾರದ ತಳಹದಿಯು, ಮೂಲಕೃಷಿ ಪ್ರಾಂತ ಭಾಷೆಯದು, ಅಡ್ಡ ಬೆಳೆ ರಾಷ್ಟ್ರಭಾಷೆಯದು ಎಂಬದನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುಂದಡಿ ಇಡಬೇಕು. ಅಂದರೆ ಪ್ರಾಂತಿಕ ಹಾಗೂ ರಾಷ್ಟ್ರೀಯ ಹಿತಸಾಧನದ ಸುಂದರ ಸಮ್ಮೇಳವಾಗಬಲ್ಲದು.

ಹಿಂದೀ--ಊರ್ದು ಎಂಬದೊಂದು ಬಹಳ ದೊಡ್ಡ ವಾದವಿದೆ. ಅದರ ಕಿಂಚಿತ್ ಕಲ್ಪನೆಯನ್ನು ಹಿಂದುಸ್ತಾನಿಯ ಇತಿಹಾಸವನ್ನು ಹೇಳುವಾಗ ಕೊಡಲಾಗಿದೆ. ಸ್ವಾಭಾವಿಕವಾಗಿ ಈ ವಾದವು ಹಿಂದೀ ಊರ್ದು ಇವು ಮಾತೃಭಾಷೆ ಪ್ರಾಂತಭಾಷೆಗಳಿದ್ದಲ್ಲಿ ಬಹಳ ತೀವ್ರಸ್ವರೂಪದವಾಗಿವೆ. ಎರಡೂ ಬಣಗಳು ಆರೋಪಪ್ರತ್ಯಾರೋಪ ಮಾಡುವಲ್ಲಿ ನಿಮಗ್ನವಾಗಿರುವವು. ಅವರ ತಪ್ಪು ಮೊದಲು, ಇವರ ತಪ್ಪು ಮೊದಲು ಎಂದು ನಿತ್ಯ ವಾದವು ನಡೆಯುತಿದೆ. ಕ್ರಿಯೆ ಪ್ರತಿಕ್ರಿಯೆರೂಪವಾಗಿ ಹಿಂದೀ ಊರ್ದುವಾದಗಳು ತಮ್ಮ ತಮ್ಮ ಭಾಷೆಯಲ್ಲಿ ಒಬ್ಬರು ಸಂಸ್ಕೃತವನ್ನು ಇನ್ನೊಬ್ಬರು ಫಾರಸಿ ಅರಬಿಯನ್ನು ತುಂಬಲಾರಂಭಿಸಿರುವರು. ಲಿಪಿ ಬಗ್ಗೆಯೂ

ಒಬ್ಬರು ನಾಗರಿಯನ್ನೇ ಉಪಯೋಗಿಸುವರು. ಇನ್ನೊಬ್ಬರು ಊರ್ದು ಲಿಪಿಯನ್ನೆ ಉಪಯೋಗಿಸುವರು. ಒಬ್ಬರು ಜರೂರ, ಕಚೇರಿ ಇಂಥ ರೂಢವಿರುವ ಸುಲಭ ಊರ್ದು ಶಬ್ದಗಳನ್ನು ಕಿತ್ತಿಹಾಕಿ ಆವಶ್ಯ, ನ್ಯಾಯಾಸನ ಎಂಬ ಕಠಿಣಶಬ್ದಗಳನ್ನು ಉಪಯೋಗಿಸಿದರೆ ಇನ್ನೊಬ್ಬರು ಭಾಷಾ, ಸಭಾ ಮುಂತಾದ ಅತಿ ಸುಲಭ ಹಿಂದೀ ಶಬ್ದಗಳನ್ನು ತಪ್ಪಿ ಕೂಡ ಉಪಯೋಗಿಸುವದಿಲ್ಲ. ನಾಗರೀ ಲಿಪಿಯ ಹೆಸರನ್ನು ಕೂಡ ಎತ್ತಗೊಡುವದಿಲ್ಲ. ಯಥಾರ್ಥವಾಗಿ ಎರಡೂ ಭಾಷೆಗಳು ಒಮ್ಮೆ ಅಂದರೆ ೧೯ನೆ ಶತಮಾನದ ಪ್ರಾರಂಭದವರೆಗೆ ಒಂದೇ ಇದ್ದವು. ೧೮೩೫ರಲ್ಲಿ ಹಿಂದುಸ್ತಾನಿಯು (ಊರ್ದು ಲಿಪಿಯಲ್ಲಿ) ಯುಕ್ತಪ್ರಾಂತ, ಬೀಹಾರಗಳಲ್ಲಿ ಕಚೇರಿಗಳ ಭಾಷೆಯಾಗಿತ್ತು. ೧೮೭೭ರಲ್ಲಿ ಹಿಂದೀ ಚಳವಳಿಗೆ ಬಿಹಾರದಲ್ಲಿ ಪ್ರಾರಂಭವಾಯಿತು. ೧೯೦೦ರಲ್ಲಿ ಯುಕ್ತಪ್ರಾಂತದಲ್ಲಿ ಹಿಂದೀ ಇದು ವೈಕಲ್ಪಿಕ ಕಚೇರಿ ಭಾಷೆಯಾಯಿತು. ೧೯೧೦ರಲ್ಲಿ ಹಿಂದೀ ಸಾಹಿತ್ಯಸಮ್ಮೇಲನವು ಅಸ್ತಿತ್ವದಲ್ಲಿ ಬಂದಿತು. ಯುಕ್ತಪ್ರಾಂತ ಹಾಗೂ ಬಿಹಾರಗಳಲ್ಲಿ ಹಿಂದೀ ಚಳವಳಿಯೂ ಬಹಳ ವೇಗದಿಂದ ಪಸರಿಸಿತು. ಹಾಗೂ ಊರ್ದು ಹಿಂದೆ ಬೀಳುತ್ತ ನಡೆಯಿತು. ಇದರ ಸಾಕ್ಷಿಯೇನಂದರೆ, ೧೮೮೯--೯೯ರಲ್ಲಿ ಯುಕ್ತಪ್ರಾಂತದಲ್ಲಿ ೩೬೧ ಹಿಂದೀ ಹಾಗೂ ೫೬೯ ಊರ್ದು ಪುಸ್ತಕಗಳು ಬರೆಯಲಾದವು. ಅದೇ ೧೯೩೫-೩೬ರಲ್ಲಿ ೨೧೩೯ ಹಿಂದೀ ಹಾಗೂ ೨೫೨ ಊರ್ದು ಪುಸ್ತಕಗಳು ಪ್ರಕಟಿಸಲಾದವು. ಹಿಂದಿಯ ಪ್ರಗತಿ ಹೀಗೆ ನಡೆದಿರುವಾಗ ಅತ್ತ ಅಂಜುಮನ್ ತರಕ್ಕೀ ಊರ್ದು ಎಂಬ ಸಂಸ್ಥೆಯ ಸ್ಥಾಪನೆ, ನೂರಕ್ಕೆ ೮೫ ಜನ ಊರ್ದು ತಿಳಿಯದವರಿದ್ದರೂ ಅವರ ಮೇಲೆ ನಿಜಾಮ ಇಲಾಖೆಯಲ್ಲಿ ಊರ್ದುವಿನ ಜುಲುಮೆ, ಹಾಗೂ ಉಸ್ಮಾನಿಯಾ ವಿಶ್ವವಿದ್ಯಾಲಯದ ಬೋಧಭಾಷೆ ಊರ್ದು ಇರುವಿಕೆ ಇವು ನಡೆದಿವೆ. ಒಟ್ಟಿಗೆ ಈ ವಾದವು ವಿಕೋಪಕ್ಕೆ ಹೋಗುತಲಿದೆ ಹಾಗೂ ಅದಕ್ಕೆ ಹಿಂದೂ ಮುಸಲ್ಮಾನ ತಂಟೆಯ ಬಣ್ಣ ಬಂದುದರಿಂದ ಅಭಿನಿವೇಶ, ಕಟುತನ ಇವು ಆ ವಾದದಲ್ಲಿ ಸಾಕಷ್ಟು ಸೇರಿವೆ. ಆದರೆ ನಾವು ಇದರಲ್ಲಿ ಸೇರುವ ಕಾರಣವೂ ಇಲ್ಲ, ಇದರಿಂದ ಗಾಬರಿಗೊಳ್ಳುವ ಕಾರಣವೂ ಇಲ್ಲ. ಈ ಬಗ್ಗೆ ಅನೇಕರು ಸಾಂಗೋಪಾಂಗವಾಗಿ ಬರೆದಿರುವರು. ಅವರೆಲ್ಲರ ವಿಚಾರಗಳನ್ನು ಸೂಕ್ಷ್ಮ ರೀತಿಯಿಂದ ಪರಿಶೀಲಿಸಿದರೆ ಈ ಕೆಳಗಿನ ನಿರ್ಣಯಕ್ಕೆ ನಾವು ಬರಬೇಕಾಗುವದು. ನಾವು ಈ ವಾದದಲ್ಲಿ ಸೇರಬಾರದು.

ಸಂಸ್ಕೃತಪ್ರಧಾನ ಹಿಂದೀ ಇಲ್ಲವೆ ಅರಬೀ ಫಾರಸಿ ಪ್ರಧಾನ ಊರ್ದು ಇವುಗಳಲ್ಲಿ ಯಾವ ಪಕ್ಷವನ್ನೂ ನಾವು ಹಿಡಿಯಬಾರದು. ಅವುಗಳನ್ನು ವಿರೋಧಿಸಲಿಕ್ಕೂ ಹೋಗಬಾರದು ಅವು ತಮ್ಮಷ್ಟಕ್ಕೆ ಅಳಿಯಲಿ, ಉಳಿಯಲಿ, ಬೆಳೆಯಲಿ, ಏನೇ ಮಾಡಲಿ, ನಾವು ರಾಷ್ಟ್ರೀಯ ದೃಷ್ಟಿಯಿಂದ ವಿಚಾರಮಾಡುವವರು ಕೇವಲ ವ್ಯವಹಾರಿಕ ಭಾಷೆಯೆಂದು ಹಿಂದುಸ್ತಾನಿಯನ್ನು ಸ್ವೀಕರಿಸುತಿರುವೆವು ಯಾವ ಭಾಷೆಯಲ್ಲಿ ಪಕ್ಷಪಾತವಿಲ್ಲದೆ ಸಾದಾ ಸಂಸ್ಕೃತ, ಫಾರಸಿ, ಅರಬೀ ಶಬ್ದಗಳ ಸಂಮಿಶ್ರಣವಿರುವದೊ, ಯಾವುದರಲ್ಲಿ ಉತ್ತಮ ಲೋಕಪ್ರಿಯ ಹಿಂದೀ ಊರ್ದು ಲೇಖಕರು ಉಪಯೋಗಿಸಿದ ಶಬ್ದಗಳ ಬಳಿಕೆಮಾಡಲಾಗುವದೋ, ಯಾವದು ಉತ್ತರಹಿಂದುಸ್ತಾನದ ಜನಸಾಮಾನ್ಯರಿಗೆ ಮೌಲವಿ ಪಂಡಿತರಿಗಲ್ಲ, ಸಹಜವಾಗಿ ತಿಳಿಯುವದೋ, ಯಾವುದು ನಾಗರಿ ಊರ್ದು ಎರಡೂ ಲಿಪಿಗಳಲ್ಲಿ ಬರೆಯಬರುವದೋ ಆ ಭಾಷೆಯನ್ನು ನಾವು ಹಿಂದುಸ್ತಾನಿಯೆಂದು ಬಳಸಬೇಕು.

ಇನ್ನು ಲಿಪಿಯ ವಾದವೊಂದುಳಿಯಿತು. ಹಲವರು ರೋಮನ್ ಲಿಪಿಯ ಪ್ರತಿಪಾದಕರಿರುವರು. ಕೆಲವು ದೃಷ್ಟಿಯಿಂದ ಅದು ಸಮಂಜಸವೆನಿಸಿದರೂ ಅದು ಸಾಧ್ಯವಾದ ವಿಷಯವಲ್ಲ. ಆ ಲಿಪಿ ಅಪೂರ್ಣವಿರುವದು, ಪೂರ್ಣ ಪರಕೀಯವಿರುವದು. ವ್ಯವಹಾರಿಕ ದೃಷ್ಟಿಯಿಂದ, ತಮ್ಮ ಲಿಪಿಯ ಬಗ್ಗೆ ಇದ್ದ ಆತ್ಮೀಯತೆ ಅಭಿಮಾನಾದಿಗಳ ದೃಷ್ಟಿಯಿಂದ, ಪರಕೀಯವೆಂಬುದು ಸಲ್ಲದು ಎಂಬ ದೃಷ್ಟಿಯಿಂದ, ಹಿಂದು ಮುಸಲ್ಮಾನ ಬಾಂಧವರ ಭಾವನೆಗಳ ದೃಷ್ಟಿಯಿಂದ, ಲಿಪಿಯ ಪೂರ್ಣತೆಯ ದೃಷ್ಟಿಯಿಂದ ನಾಗರಿ ಊರ್ದು ಲಿಪಿಗಳೇ ಯೋಗ್ಯವಾದವುಗಳೆನ್ನಬೇಕಾಗುವದು. ಆ ಎರಡೂ ಲಿಪಿಗಳಲ್ಲಿ ಅವಶ್ಯವಿದ್ದ ಸುಧಾರಣೆಗಳನ್ನು ಮಾಡಲು ಯಾವ ಅಡ್ಡಿಯೂ ಇರಕೂಡದು. ಅಂದರಾಯಿತು. ಸದ್ಯಕ್ಕೆ ಒಂದೇ ಲಿಪಿಯ ಹಟವನ್ನು ಹಿಡಿಯುವದರಲ್ಲಿ ಅರ್ಥವಿಲ್ಲ

## ಕೊನೆಮಾತು

ಪ್ರಾಂತಭಾಷೆ, ರಾಷ್ಟ್ರಭಾಷೆ. ಇವುಗಳ ಬಗ್ಗೆ ಆದಷ್ಟು ಸಂಕ್ಷೇಪದಲ್ಲಿ ನಾಲ್ಕು ಮಾತುಗಳನ್ನು ಬರದುದಾಯಿತು. ಎರಡೂ ಒಂದಕ್ಕೊಂದು ಪೋಷಕ,

ಸಹಕಾರಿ. ಎರಡರಿಂದಲೂ ಸಾಧಿಸತಕ್ಕ ಮಾತು ಒಂದೇ. ಜನಜಾಗ್ರತಿ
ಜನಜೀವನದ ವಿಕಾಸ. ಎರಡೂ ತಮ್ಮ ತಮ್ಮ ಕಾರ್‍ಯರಂಗದಲ್ಲಿ ಕೆಲಸ ಮಾಡಿ
ದರೆ ಅವು ಅವಿರೋಧದಿಂದ ಬೆಳೆದು ಎರಡಕ್ಕೂ ಸಾಮಾನ್ಯವಾದ ಸಾಧ್ಯ
ವನ್ನು ಸಾಧಿಸುವವು. ಪ್ರಾಂತವೆಂಬುದು ರಾಷ್ಟ್ರದ ಅಂಗವು. ರಾಷ್ಟ್ರದ
ಹೊರತು ಪ್ರಾಂತವೆಂಬುದಕ್ಕೆ ಅರ್ಥವಿಲ್ಲ. ರಾಷ್ಟ್ರವೆಂಬುದು ಪ್ರಾಂತಗಳ
ಸಂಘ. ಪ್ರಾಂತಗಳ ಹೊರತು ರಾಷ್ಟ್ರವೆಂಬುದಕ್ಕೆ ಅರ್ಥವಿಲ್ಲ. ಅದೇ ರೀತಿ
ಪ್ರಾಂತಭಾಷೆಗೆ ರಾಷ್ಟ್ರಭಾಷೆಯ ಅಪೇಕ್ಷೆ ಇದೆ, ರಾಷ್ಟ್ರಭಾಷೆಗೆ ಪ್ರಾಂತ
ಭಾಷೆಯ ಅಪೇಕ್ಷೆ ಇದೆ ಇವೆರಡನ್ನೂ ಹೊಂದಿಸಿಕೊಂಡು ಹೋಗುವದು
ಕ್ರಮಪ್ರಾಪ್ತವು. ದೂರದೃಷ್ಟಿಯ ಲಕ್ಷಣವು, ಸಂಘಟಿತ ತೇಜಸ್ವಿ ಜೀವ
ನಕ್ಕೆ ಅವಶ್ಯವು ಪ್ರಾಂತಗಳಲ್ಲಿ ವಿವಿಧತೆ ಇದೆ. ರಾಷ್ಟ್ರದಲ್ಲಿ ಏಕಸೂತ್ರತೆ
ಇದೆ. ಪ್ರಾಂತಗಳಲ್ಲಿ ಭಿನ್ನತೆ ಇದ್ದರೂ ಭೇದಭಾವವುಂಟಾಗಬಾರದೆಂದಿ
ದ್ದರೆ ಏಕರಾಷ್ಟ್ರೀಯತೆಯ ಛತ್ರವು ಅವಶ್ಯವು. ಒಂದೇ ಭೂಭಾಗ, ಒಂದೇ
ರಾಷ್ಟ್ರಧ್ವಜ, ಒಂದೇ - ರಾಷ್ಟ್ರಗೀತ, ಒಂದೇ ಸಮವಸ್ತ್ರ, ಒಂದೇ ಭಾವನೆ
ಹೇಗೋ ಹಾಗೆಯೆ ಒಂದೇ ರಾಷ್ಟ್ರಭಾಷೆ ಇದು ಏಕತೆಯ ಕುರುಹು. ಈ ಎಲ್ಲ
ಮಾತುಗಳನ್ನು ಅನುಲಕ್ಷಿಸಿ ಕರ್ನಾಟಕಸ್ಥರು ನವಯುಗದಲ್ಲಿ ಕಾಲಿಡಲಿ.
ಜನರ ಅಂತಃಕರಣದ ತಂತಿಗಳನ್ನು ಮಿಡಿದು ಅದರಲ್ಲಿ ವೀರಸಂಗೀತವನ್ನು
ಹುಟ್ಟಿಸಲಿ ಅಜ್ಞಾನನಿರಸನ ಮೂಲಕ, ಜ್ಞಾನಪೂರ್ವಕ ಹೋರಾಡಿ
ಸ್ವತಂತ್ರ ಹಿಂದುಸ್ಥಾನದಲ್ಲಿ ಏಕತಂತ್ರ ಕರ್ನಾಟಕವನ್ನು ಪಡೆಯಲಿ.
ಕಾಂಗ್ರೆಸ್ಸು, ಸ್ವಾತಂತ್ರ್ಯದ ಅಧಿದೇವತೆಯಾದ ರಾಷ್ಟ್ರಸಭೆ ಎಲ್ಲರಿಗೂ ಬಲ
ತೇಜಸಾಹಸಗಳನ್ನು ಕೊಟ್ಟು ಅಖಂಡಸೇವೆ ಪಡೆಯಲಿ. ಹಿಂದುಸ್ಥಾನ
ನೈತಿಕ ತೇಜಸ್ಸಿನ ತವರೂರಾಗಿ ಮೆರೆದು ಜಗತ್ತಿಗೆ ಮಾರ್ಗದರ್ಶಕವಾಗಲಿ.

# ಪರಿಶಿಷ್ಟ

—[೦]—

**ಟೀಪು:**—ಈ ಕೆಳಗೆ ಹಲವು ಅಂಕಿ ಸಂಖ್ಯೆಗಳು ಕೊಡಲಾಗಿವೆ. ಅವು ಈ ವಿಷಯದ ಅಭ್ಯಾಸಕ್ಕೆ ಸಹಾಯಕವಾಗುವವೆಂದು ಆಶಿಸಲಾಗಿದೆ.

(ಅ) ಪ್ರಾಂತಿಕ ಭಾಷೆಗಳು ಮತ್ತು ಭಾಷಾನುಗುಣ ಜನಸಂಖ್ಯೆ-

| | |
|---|---|
| ೧. ಹಿಂದುಸ್ತಾನಿ | ೧೫,೨೩,೯೭,೪೦೯ |
| [ಇದರಲ್ಲಿ ಪಂಜಾಬ, ಯುಕ್ತಪ್ರಾಂತ, ಸಿಂಧ, ಬಿಹಾರ, ಮಧ್ಯಪ್ರಾಂತದ ಅರ್ಧಭಾಗ ಬರುವದು.] | |
| ೨. ಬಂಗಾಲಿ | ೫,೩೪,೬೮,೪೬೦ |
| ೩. ತೆಲುಗು | ೨,೬೩,೭೩,೫೧೪ |
| ೪. ಮರಾಠಿ | ೨,೧೩,೬೧,೩೯೯ |
| ೫. ತಮಿಳು | ೨,೦೪,೧೧,೬೫೨ |
| ೬. ಗುಜರಾಥಿ | ೧,೩೨,೭೮,೭೨೦ |
| ೭. ಕನ್ನಡ | ೧,೧೨,೦೬ ೩೮೦ |
| ೮. ಊಡಿಯಾ | ೧,೧೧,೯೪,೨೬೫ |
| ೯. ಮಲಯಾಳಿ | ೯೧,೩೭,೬೧೫ |
| ೧೦ ಆಸಾಮಿ | ೧೯,೯೯,೦೫೭ |
| ೧೧ ಇತರ ಭಾಷೆಗಳು ಕೂಡಿ | ೧,೭೦,೨೨,೮೪೦ |
| ೧೨ ಇಂಗ್ಲಿಷ [ಇದು ಪ್ರಾಂತಿಕ ಭಾಷೆಯಲ್ಲ] | ೩,೧೯,೩೧೨ |
| | ೩೩,೮೧,೭೦,೬೩೨ |

**ಸೂಚನೆ**— ಈ ಸಂಖ್ಯೆಗಳು ೧೯೩೧ರಲ್ಲಿಯವು ಇವೆ.

(ಬ) ಕಾಂಗ್ರೆಸ ಘಟನೆಯ ಮೇರೆಗೆ ಭಾಷಾನುಗುಣ ಪ್ರಾಂತಗಳು, ಹಾಗೂ ಪ್ರಚಲಿತವಿದ್ದ ಭಾಷೆಗಳು.

| ಪ್ರಾಂತದ ಹೆಸರು | ಭಾಷೆ |
|---|---|
| ೧. ನೈಋತ್ಯಪ್ರಾಂತ ಅಥವಾ ಗಡಿನಾಡು | ಪುಸ್ತು |

೨. ಪಂಜಾಬ — ಪಂಜಾಬಿ
೩. ಸಿಂಧ — ಸಿಂಧಿ
೪ ಯುಕ್ತಪ್ರಾಂತ — ಹಿಂದುಸ್ತಾನಿ
೫. ಬಿಹಾರ — ಬಿಹಾರಿ (ಹಿಂದುಸ್ತಾನಿ)
೬. ಬಂಗಾಲ — ಬಂಗಾಲಿ
೭. ಆಸಾಮು — ಆಸಾಮಿ
೮. ಗುಜರಾಥ — ಗುಜರಾಥಿ
೯. ಮಹಾರಾಷ್ಟ್ರ — ಮರಾಠಿ
೧೦ ಕರ್ನಾಟಕ — ಕನ್ನಡ
೧೧ ಉತ್ಕಲ — ಊಡಿಯಾ
೧೨ ಆಂಧ್ರ — ತೆಲುಗು
೧೩ ತಮಿಳುನಾಡು — ತಮಿಳು
೧೪ ಕೇರಳ — ಮಲಯಾಳಿ

(ಕ) ಇನ್ನೊಂದು ದೃಷ್ಟಿಯಿಂದ ಜನಸಂಖ್ಯೆಯು ವಿವರ (೧೯೩೧ರಲ್ಲಿಯ ಸಂಖ್ಯೆ)

೧. ಸಂಸ್ಕೃತ ವರ್ಗಕ್ಕೆ ಸೇರಿದ ಭಾಷೆಗಳನ್ನಾಡುವವರು — ೨೫,೩೭,೧೨೦೦೦
೨. ಮಾತೃಭಾಷೆ ಹಿಂದುಸ್ತಾನಿ ಇದ್ದವರು — ೧೨,೦೨,೩೯೦೦೦
೩. ಹಿಂದುಸ್ತಾನಿ ತಿಳಿಯಬಲ್ಲವರು — ೧೧,೦೦,೦೦೦೦೦
೪. ದೇವನಾಗರಿ ಲಿಪಿ ಬರೆಯುವವರು — ೧೧,೧೧,೨೯೦೦೦
೫. ದೇವನಾಗರಿಗೆ ಹೋಲುವ ಲಿಪಿ ಬರೆಯುವವರು — ೯,೩೩,೫೧೦೦೦
೬. ಸಂಸ್ಕೃತ ವರ್ಣಸ್ಸುಳ್ಳ ದ್ರಾವಿಡಿ ಭಾಷೆಯುವರು — ೪,೬೭,೧೮೦೦೦
೭. ಸಂಸ್ಕೃತ ಮಿಶ್ರದಾವಿಡ ಭಾಷೆಯಾಡುವವರು — ೨,೧೪೦೦೦೦೦

ಇದನ್ನೆ ಬೇರೆ ರೀತಿ ಹೇಳುವದಾದರೆ—

೧೦೦೦೦ದಲ್ಲಿ ೯೯೮೨ ಜನ ಹಿಂದುಸ್ತಾನದಲ್ಲಿಯೆ ಹುಟ್ಟಿಬೆಳೆದ ಭಾಷೆಯನ್ನಾಡುವವರಿರುವರು.

,, ,, ೭೨೩೫ ಜನ ಸಂಸ್ಕೃತ ಜನ್ಯ ಸಂಸ್ಕೃತ ಪುಷ್ಟ

ಭಾಷೆಯುವರು

,, ,, ೪೦೫೩ ದೇವನಾಗರಿ ಲಿಪಿ ಉಪಯೋಗಿಸುವರು.

,, ,, ೨೬೬೨ ದೇವನಾಗರಿಗೆ ಹೋಲುವ ಲಿಪಿ

ಉಪಯೋಗಿಸುವರು.

ಇದರ ಅರ್ಥ ೧೦೦೦೦ದಲ್ಲಿ ೬೭೧೫ ಜನಕ್ಕೆ ದೇವನಾಗಿರಿ ಲಿಪಿ ಅನುಕೂಲ.

(ಡ) ಹಿಂದೀ ಮತ್ತು ಊರ್ದು ಭಾಷೆಗಳ ವ್ಯಾಕರಣ, ವಾಕ್ಯರಚನೆ, ಕ್ರಿಯಾಪದಗಳು, ಉಪಸರ್ಗಗಳು, ಸಮುಚ್ಚಾಯಕಗಳು, ಸರ್ವನಾಮಗಳು, ಸ್ವರಪದ್ಧತಿ, ಶಬ್ದ ಮತ್ತು ಕ್ರಿಯಾಪದಗಳನ್ನು ನಡೆಸುವದು ಎಲ್ಲಿ ಒಂದೇ ಇರುವವು. ಇನ್ನೂ ಶಬ್ದಗಳ ವಿಷಯದಲ್ಲಿ ಈ ಕೆಳಗಿನ ಮಾತುಗಳು ನೋಡುವಂತಿವೆ.

ಊರ್ದು ನಿಘಂಟು ಫರಂಗ ಈ ಅಸಫಿ ಎಂಬದರಲ್ಲಿ ೫೦೦೦೦ ಶಬ್ದಗಳು ಕೊಡಲಾಗಿವೆ. ಅವುಗಳಲ್ಲಿ ಈ ಕೆಳಗಿನಂತೆ ಶಬ್ದಗಳಿವೆ:- ೭೫೮೪ ಅರಬೀ, ೬೦೪೧ ಫಾರಸಿ, ೫೫೪ ಸಂಸ್ಕೃತ, ೫೦೦ ಇಂಗ್ಲೀಷ. ಹಿಂದೀ ಶಬ್ದ ಸಾಗರ ಎಂಬ ಹಿಂದೀ ನಿಘಂಟುವಿನಲ್ಲಿ ಇವೆಲ್ಲ ಹಿಂದೀ ಶಬ್ದಗಳೆಂದು ಸ್ವೀಕರಿಸಲಾಗಿದೆ.

(ಇ) ಮುಸಲ್ಮಾನರೆಂಬವರೆಲ್ಲರೂ ಊರ್ದು ಮಾತೃಭಾಷೆಯುಳ್ಳವರಿಲ್ಲ, ಅಥವಾ ಹಿಂದುಗಳೆನ್ನುವರೆಲ್ಲರೂ ಹಿಂದೀ (ಸಂಸ್ಕೃತ ಪ್ರಧಾನ) ಮಾತೃಭಾಷೆಯುಳ್ಳವರಿಲ್ಲ. ಉದಾ: ಬಂಗಾಲದ ೩ ಕೋಟಿ ಮುಸಲ್ಮಾನರ ಮಾತೃಭಾಷೆ ಬಂಗಾಲಿ ಇರುವದು. ಮಲಯಾಳದ ೩೦ ಲಕ್ಷ ಮುಸಲ್ಮಾನರು ಮಲಯಾಳಿ ಮಾತೃ ಭಾಷೆಯುಳ್ಳವರು ಇರುವರು.

(ಈ) ಹಿಂದುಸ್ತಾನದಲ್ಲಿ ಅಕ್ಷರಸ್ಥರ ಪ್ರಮಾಣವು ನೂರಕ್ಕೆ ೧೨ ಮಾತ್ರ ಇಂಗ್ಲೀಷ ಬಲ್ಲವರು ನೂರಕ್ಕೆ ೧.೨೫ ಅಥವಾ ಸಾವಿರಕ್ಕೆ ೧೨ವರೆ ಮಾತ್ರ.

(ಉ) ಕರ್ನಾಟಕದಲ್ಲಿ ಪ್ರಚಾರದಲ್ಲಿರುವ ಉಪಭಾಷೆಗಳಾದ ಕೊಡಗು, ಬಡಗು, ತುಳು ಮಾತಾಡುವವರ ಸಂಖ್ಯೆ ಸಾಧಾರಣವಾಗಿ ಕೊಡಗರು, ೧೫೦೦೦೦, ಬಡಗರು ೧೫೪೦೦೦, ತುಳು ೫೦೦೦೦೦

## ಓದಬೇಕಾದ ಪುಸ್ತಕಗಳು

1. *History of the Congress* by Pattabhi
2. *Constructive Programme* by M. K. Gandhi
3. *Constrnctive Programme* by Rajendra Prasad
4. *National Language for India* by Z. A. Ahmad
5. *The Question of Language* by Jawaharlal Nehru
6. *Educational Reconstruction* by Aryanayakam :
7. ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾ ಮದ್ರಾಸ—ವರದಿ